# ಸಿದ್ಧಗಂಗಾ

ಜನವರಿ ೨೦೦೩

ಸಂಪುಟ : ೩೯ ಸಂಚಿಕೆ : ೧

ತುಮಕೂರಿನ ರಾಮಕೃಷ್ಣ ವಿವೇಕಾನಂದ ಆಶ್ರಮದಲ್ಲಿ ನಡೆದ ಶ್ರೀ ರಾಮಕೃಷ್ಣ ಭಕ್ತ ಸಮ್ಮೇಳನವನ್ನು ಸಿದ್ದಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

ನಂದಿಬೆಟ್ಟದಲ್ಲಿ ನಡೆದ ಗುರುವಂದನಾ ಸಮಾರಂಭವನ್ನು ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಉದ್ಘಾಟಿಸುತ್ತಿರುವುದು.

ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿದ್ದ ಕೇಂದ್ರ ಸಚಿವ ಶ್ರೀ ಬಸವನಗೌಡ ಪಾಟೀಲ ಯತ್ನಾಳ್ ಅವರು ಪರಮ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆಯುತ್ತಿರುವುದು



ಮುಖಪುಟ
ವಿವಿಧ ಸಮಾರಂಭಗಳಲ್ಲಿ
ಪರಮಪೂಜ್ಯ ಶ್ರೀ ಶ್ರೀಗಳವರು

ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು, ಜಾಹಿರಾತು ವಿಭಾಗ
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಅವಾವ ಕಾಯಕವ ಮಾಡಿದರು ಬಸವೇಶ
ಅವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೯ ಜನವರಿ ೨೦೦೩ ಸಂಚಿಕೆ : ೧

## ಒಳಪುಟಗಳಲ್ಲಿ..........



ವಿಳಾಸ :
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೬೦೦/– |
| ಬಿಡಿ ಪ್ರತಿ | ರೂ. ೧೦.೦೦ |



## ಕಾಲ .......

ಕಾಲ ಚಲನಶೀಲವಾದುದು. ಸದಾ ಉರುಳುತ್ತಲೇ ಇರುವುದೇ ಅದರ ಧರ್ಮ. ೨೦೦೨ ಕಳೆಯಿತು, ಹತ್ತು ಹನ್ನೊಂದು ಮಿಶ್ರ ಅನುಭವಗಳನ್ನು ನೀಡಿ ಹೋಯಿತು. ಜಾಗತಿಕ ಸ್ತರದಲ್ಲಿ ನಡೆದ ಘಟನೆಗಳು ತತ್ತರಗೊಳಿಸಿದುವು. ರಾಷ್ಟ್ರಮಟ್ಟದಲ್ಲಿ ನಡೆದ ವಿಪ್ಲವಗಳೇನೂ ಸಾಮಾನ್ಯವೆನಿಸಲಿಲ್ಲ. ಗುಜರಾತಿನ ನರಮೇಧ ಹೃದಯವನ್ನೇ ಕಲುಕಿತು. ನೂತನ ರಾಷ್ಟ್ರಪತಿಗಳ ಅಧಿಕಾರ, ರಾಷ್ಟ್ರದ ಮಹಾಸೇನಾ ದಂಡನಾಯಕರಾಗಿ ಕಾರ್ಗಿಲ್ ಜನರಲ್ ನಿರ್ಮಲಚಂದ್ರ ವಿಜ್‌ರಿಂದ ಅಧಿಕಾರ ಸ್ವೀಕಾರ. ಶ್ರೀ ವಾಜಪೇಯಿಯವರ ಆತ್ಮಕಥನ ಪ್ರಕಟಣೆ, ರಾಜ್ಯದಲ್ಲಿಯೂ ಸಂಭವಿಸಿದ ಕಹಿ ಪ್ರಕರಣಗಳು ಒಂದಲ್ಲ ಎರಡಲ್ಲ. ಪ್ರಮುಖವಾಗಿ ಕಾವೇರಿ ನೀರಿನ ಹಂಚಿಕೆಯಲ್ಲಾದ ವಿವಾದ, ಸುಪ್ರೀಂಕೋರ್ಟ್‌ನವರೆಗೂ ಬೆಳೆದದ್ದು ರಾಜ್ಯಾಡಳಿತ ಸೂತ್ರ ಹಿಡಿದವರು ನಡೆದುಕೊಂಡ ರೀತಿ, ಬರದ ಬರೆಯಿಂದ ಕಂಗಾಲಾದ ಹಳ್ಳಿ ಬಂಧುಗಳ ಕಣ್ಣೀರು, ರೈತವರ್ಗದ ಬಂಧುಗಳು ನಡೆಸಿದ ಮುಷ್ಕರ, ಕಬಿನಿ ನದಿಯಲ್ಲಿ ಧುಮುಕಿ ಪ್ರಾಣತ್ಯಾಗ ಮಾಡಿ ರೈತನ ಸಾವು, ಇದೇ ವೇಳೆಗೆ ಧುತ್ತೆಂದು ಎದುರಾದ ಶ್ರೀ ನಾಗಪ್ಪನವರ ಅಪಹರಣ, ವೀರಪ್ಪನನ್ನು ಹಿಡಿಯುವಲ್ಲಿ ಕಣ್ಣುಮುಚ್ಚಾಲೆ ಆಡುತ್ತಿರುವ ಸರ್ಕಾರ, ನಾಗಪ್ಪನವರ ದುರಂತ ಸಾವು, ಅದರ ಬೆನ್ನಿಗೆ ಎದ್ದು ಕೂಗುತ್ತಿರುವ ಜನಧ್ವನಿ ನಿವೃತ್ತ ಡಿ.ಜಿ.ಪಿ. ಶ್ರೀ ದಿನಕರ್ ಅವರ ಗ್ರಂಥ ''ವೀರಪ್ಪನ್ ಪ್ರೈಜ್ ಕ್ಯಾಚ್'' ಪ್ರಕಟಣೆ, ನೂತನ ರಾಜ್ಯಪಾಲ ಶ್ರೀ ಟಿ.ಎನ್. ಚತುರ್ವೇದಿ ಅವರ ಆಗಮನ, ಹಳಬರ ನಿರ್ಗಮನ, ರಾಜ್ಯದ ಮುಖ್ಯ ಕಾರ್ಯದರ್ಶಿಗಳಾಗಿ ಶ್ರೀ ಬಿ.ಎಸ್. ಪಾಟೀಲರಿಂದ ಅಧಿಕಾರ ಸ್ವೀಕಾರ, ನ್ಯಾಯಾಧೀಶರ ಮೈಸೂರಿನ ರೆಸಾರ್ಟ್‌ನ ಪ್ರಕರಣ, ಹುಬ್ಬಳ್ಳಿ – ಧಾರವಾಡ ಅವಳಿ ನಗರಗಳಲ್ಲಿ ಸ್ಥಾಪಿತವಾಗಬೇಕಾದ ಹೈಕೋರ್ಟ್ ಪೀಠಸ್ಥಾಪನೆ – ಡಾ. ಡಿ.ಎಂ. ನಂಜುಂಡಪ್ಪನವರ ವರದಿ, ಐ.ಟಿ. ಪಾರ್ಕ್ ಸ್ಥಾಪನೆ. ಅಖಂಡ ಕರ್ನಾಟಕವನ್ನು ಒಡೆಯುವ ಒಡಕು ಧ್ವನಿ, ರಾಷ್ಟ್ರನಾಯಕ ದಿವಂಗತ ಎಸ್. ನಿಜಲಿಂಗಪ್ಪನವರ ಜನ್ಮ ಶತಾಬ್ದಿ ಆಚರಣೆ, ಶ್ರೀಮತಿ ಗಂಗೂಬಾಯಿ ಹಾನಗಲ್ ಅವರಿಗೆ ಪದ್ಮಭೂಷಣ ಪ್ರಶಸ್ತಿ, ಕವಿ ಕುವೆಂಪು ಜನ್ಮಶತಾಬ್ಧಿ ಆಚರಣೆ, ಡಾ. ಎಂ. ಚಿದಾನಂದಮೂರ್ತಿಯವರಿಗೆ ಪಂಪ ಪ್ರಶಸ್ತಿ, ಡಾ. ಎಲ್. ಬಸವರಾಜು ಅವರಿಗೆ ಚಾವುಂಡರಾಯ ಪ್ರಶಸ್ತಿ, ಡಾ. ಪಾಟೀಲ ಪುಟ್ಟಪ್ಪನವರು ಎಪ್ಪತ್ತನೆ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ನಿಯೋಜಿತರಾಗಿದ್ದು, ಡಾ. ಎಂ.ಎಂ. ಕಲಬುರ್ಗಿಯವರು ಏಳನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆ, ಡಾ. ಎಸ್. ನಾರಾಯಣಶೆಟ್ಟಿ 'ಸುಜನಾ' ಅವರ 'ಯುಗಸಂಧ್ಯಾಕ್ಕೆ' ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕಾರ ಈ ಎಲ್ಲ ನೆನಪುಗಳನ್ನು ೨೦೦೨ ತಂದುಕೊಟ್ಟಿತು.

ಶ್ರೀಮಠದ ಜೀವನದಲ್ಲಿಯೂ ಜನವರಿ ೧ರಿಂದ ಪ್ರಾರಂಭವಾದ ಲಿಂಗೈಕ್ಯ ಪೂಜ್ಯ ಶ್ರೀ ಅಟವಿಸ್ವಾಮಿಗಳ ಹಾಗೂ ಲಿಂಗೈಕ್ಯ ಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ೬೧ನೆಯ ಪುಣ್ಯಾರಾಧನೆಯಿಂದ ನಡೆದು ಬಂದ ಧಾರ್ಮಿಕ ಸಾಂಸ್ಕೃತಿಕ ಕಾರ್ಯಕ್ರಮಗಳು, ಮಹಾಶಿವರಾತ್ರಿ ಸಂದರ್ಭದಲ್ಲಿ ಜರುಗುವ ಜಾತ್ರೆ, ವಸ್ತು ಪ್ರದರ್ಶನ, ಏಪ್ರಿಲ್ ತಿಂಗಳಿನಲ್ಲಿ ಗುರುವಂದನ, ದಸರಾ ಸಂದರ್ಭದಲ್ಲಿ ನಡೆಯುವ ಒಂಬತ್ತು ದಿನಗಳ ಉತ್ಸವಗಳು, ರಾಷ್ಟ್ರೀಯ ಹಬ್ಬಗಳು, ಶ್ರೀಗಳವರ ವಜ್ರಮಹೋತ್ಸವ ಸ್ಮರಣಾರ್ಥ ಕ್ರೀಡಾಕೂಟಗಳು, ಡಾಬಸ್‌ಪೇಟೆಯಲ್ಲಿ ನೂತನವಾಗಿ ನಿರ್ಮಾಣವಾದ ಕಲ್ಯಾಣಧಾಮ, ವರ್ಷದ ಉದ್ದಕ್ಕೂ ಬೀದರ್ ಜಿಲ್ಲೆಯ ಬಸವಕಲ್ಯಾಣವನ್ನೂ ಒಳಗೊಂಡಂತೆ ಮಂಡ್ಯ, ತುಮಕೂರು, ಚಾಮರಾಜನಗರ, ಮೈಸೂರು, ಹಾಸನ, ಚಿಕ್ಕಮಗಳೂರು, ಕೋಲಾರ, ಬೆಂಗಳೂರು, ಜಿಲ್ಲೆಗಳಲ್ಲಿ ಮೂವತ್ತಾರು ಗ್ರಾಮಗಳಲ್ಲಿ ಗ್ರಾಮಾಂತರ ಬಸವ ಜಯಂತಿ ಆಚರಣೆಯ ಮೂಲಕ ಶ್ರೀ ಜಗಜ್ಯೋತಿ ಬಸವೇಶ್ವರ ನಾಟಕ ಪ್ರದರ್ಶನ, ಬಸವತತ್ವ ಪ್ರಚಾರ, ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರ ದೆಹಲಿ ಪ್ರವಾಸ, ಶ್ರೀ ಶೈಲ-ಕದಳಿವನ ಪ್ರವಾಸ, ಪರಮಪೂಜ್ಯ ಶ್ರೀ ಶ್ರೀಗಳವರಿಗೆ ನಂದಿಬೆಟ್ಟದಲ್ಲಿ ಭಕ್ತಾದಿಗಳಿಂದ ಗುರುವಂದನ ಸಮರ್ಪಣೆ, ಹಳೆವಿದ್ಯಾರ್ಥಿಸಂಘದ ನಲವತ್ತೆಂಟನೆ ಮಹಾಧಿವೇಶನ, ''ಶ್ರೀ ಸಿದ್ಧಗಂಗಾ ಮಠ ನನಗೆ ಆಶ್ರಯ ಕೊಡದೇ ಹೋಗಿದ್ದರೆ ನನ್ನ ಜೀವನ ಏನಾಗುತ್ತಿತ್ತೋ'' – ಎಂಬ ಕೃತಜ್ಞತೆಯ ನುಡಿಗಳು, ಶ್ರೀಗಳವರ ಪ್ಲಾಟಿನಂ ಉತ್ಸವ ಯೋಜನೆ, ಶತಮಾನೋತ್ಸವ ಯೋಜನೆ, ಮಹಾದಾಸೋಹ ಯೋಜನೆ, ಸಿದ್ಧಗಂಗಾ ಅಭಿವೃದ್ಧಿ ಯೋಜನೆಗಳು, ಚುರುಕುಗೊಂಡು ಕಳೆದ ವರ್ಷ ಸೇವಾಪಥದಲ್ಲಿ ಮುನ್ನಡೆದವು. ಶ್ರೀಮಠದ ಹಿರಿಯರಲ್ಲೊಬ್ಬರಾಗಿ ಬಹುದೀರ್ಘಕಾಲ ಸೇವೆಸಲ್ಲಿಸಿದ ವಿದ್ವಾನ್ ಶ್ರೀ ಬಿ. ಗಂಗಪ್ಪನವರು ಮತ್ತು ವಸ್ತುಪ್ರದರ್ಶನದ ಸಹಕಾರ್ಯದರ್ಶಿಗಳಾಗಿ ಹಾಗೂ ತುಮಕೂರಿನ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಕೆ. ವೀರಭದ್ರಯ್ಯನವರು ನಮ್ಮನ್ನಗಲಿದ್ದು ಮರೆಯಲಾರದ ಘಟನೆಗಳು.

೨೦೦೨ ಮುಗಿಯಿತು. 'ಸಿದ್ಧಗಂಗಾ' ಪತ್ರಿಕೆ ೨೦೦೩ಕ್ಕೆ ಮುನ್ನಡೆಯಿತು. ಪತ್ರಿಕೆಯ ಬೆಳವಣಿಗೆಗೆ ಬೆನ್ನಿಗೆ ನಿಂತವರು ಪೂಜ್ಯ ಶ್ರೀಗಳು, ಹಳೆವಿದ್ಯಾರ್ಥಿ ಸಂಘ, ಪ್ರಕಾಶಕರು, ಲೇಖಕರು, ಜಾಹಿರಾತುದಾರರು, ಆಜೀವಸದಸ್ಯರು, ಸಾಮಾನ್ಯ ಸದಸ್ಯರು, ಸಂಪಾದಕ ಬಳಗ ಸಲಹಾ ಸಮಿತಿ ಎಲ್ಲರ ಸಹಕಾರದ ಸವಿ ಸವಿದು ನಿಮ್ಮ ಪ್ರೀತಿ ಅಭಿಮಾನದ ಪತ್ರಿಕೆಯಾಗಿ ನಿಮ್ಮ ಕೈಯೊಳಗೆ ನಗುತ್ತಿದೆ. ಎಲ್ಲರಿಗೂ ನೂತನ ವರ್ಷಕ್ಕೆ ಶುಭಾಶಯಗಳು.

– ಸಂಪಾದಕ







## ಶ್ರೀಮಠದ ಅಮೂಲ್ಯ ಸಂಪತ್ತು

ನೀವೆಲ್ಲ ಹೃದಯವಂತರು. ಶ್ರೀಮಠದ ಅಮೂಲ್ಯ ಸಂಪತ್ತು. ನಿಮ್ಮ ಅಭಿಮಾನ ಅಪೂರ್ವ. ಬೇಕಾದ ಮಠಮಾನ್ಯಗಳಿಗೂ ಇಲ್ಲದ ಭಾಗ್ಯ ಶ್ರೀಮಠದ್ದಾಗಿದೆ. ನಿಮಗೆ ಸಂಸ್ಥೆ ಮೃಷ್ಟಾನ್ನವನ್ನೇನೂ ನೀಡಲಿಲ್ಲ. ತನ್ನ ಇತಿಮಿತಿಗನುಗುಣವಾಗಿ ಸರಳ ಸಾಧಾರಣ ಹಿಟ್ಟು-ಸೊಪ್ಪನ್ನು ಮಾತ್ರ ನೀಡಿತು. ಆದರೆ ನೀವೆಲ್ಲ ಅದನ್ನೇ ಕಣ್ಣಿಗೊತ್ತಿಕೊಂಡು ಪವಿತ್ರಭಾವನೆಯಿಂದ ಸ್ವೀಕರಿಸಿದಿರಿ. ಒಂದು ದಿನವೂ ಬೇಸರಿಸಲಿಲ್ಲ. ಗೊಣಗಲಿಲ್ಲ. ತೃಪ್ತಿಯನ್ನು ಹೊಂದಿ ಮುಂದೆ ಬಂದಿರಿ. ನಿಮ್ಮ ಅಭಿಮಾನವನ್ನು ಏನೆನ್ನಲಿ. ಇಂದು ನೀವು ಸ್ಥಿತಿವಂತರಾಗಿದ್ದೀರಿ. ಸಮಾಜದಲ್ಲಿ ಗಣ್ಯ ಸ್ಥಾನಮಾನ ಗಳಿಸಿದ್ದೀರಿ. ಘನತೆ ಗೌರವಾದರಗಳಿಗೆ ಪಾತ್ರರಾಗಿದ್ದೀರಿ. ಸಾರ್ವಜನಿಕ ಜೀವನದಲ್ಲಿ ಆದರ್ಶಪ್ರಾಯರಾಗಿ ಬಾಳುತ್ತಿದ್ದೀರಿ. ಅದೇ ನಮಗೆ ಸಂತೋಷ. ಉಪಕಾರ ಸ್ಮರಣೆಯ ಸುಸಂಸ್ಕೃತಿಯ ದೀಪಗಳಾಗಿ ನಡೆದುಕೊಳ್ಳುತ್ತಿದ್ದೀರಿ, ಸಂಸ್ಥೆಯ ಸೇವೆ ಸಾರ್ಥಕವಾಯಿತೆಂದುಕೊಳ್ಳಬೇಕಾಗಿದೆ.

ನಮ್ಮನ್ನು ಹೊಗಳುತ್ತಿದ್ದೀರಿ. ನಮಗದು ಪ್ರಿಯವಾದುದಲ್ಲ. ನಮ್ಮ ಕರ್ತವ್ಯ, ಧರ್ಮ, ಸೇವೆ ಎಂದು ಭಾವಿಸಿದ್ದೇವೆ. ಪ್ರಪಂಚ ಇಂದು ವೇಗವಾಗಿ ಸಾಗಿದೆ. ಪ್ರಗತಿ-ಭೌತಿಕ ಪ್ರಗತಿ ಅನೂಹ್ಯವಾಗಿ ನಡೆದಿದೆ. ಇಷ್ಟಾಗಿಯೂ ನಿರಾಶೆ ವ್ಯಾಪಕವಾಗಿದೆ. ಸಮಸ್ಯೆಗಳಿಗೆ ಲೆಕ್ಕವಿಲ್ಲ. ಎಲ್ಲೆಲ್ಲೂ ನೆಮ್ಮದಿ ಇಲ್ಲ, ಅಸಮಧಾನ ಹೊಗೆಯಾಡುತ್ತಿದೆ, ವಾತಾವರಣ ಭಯಾನಕವಾಗಿದೆ. ಭಯೋತ್ಪಾದನೆ ರಕ್ತಬೀಜಾಸುರನಂತೆ ಬೆಳೆಯುತ್ತಿದೆ. ದುರಾಶೆ, ದುರಾಚಾರ, ದುಶ್ಚಟಗಳ ನಗ್ನನೃತ್ಯ ವಿಜೃಂಭಿಸಿದೆ. ಸಹವಾಸ ದೋಷ ನಿಮ್ಮನ್ನು ಬಿಟ್ಟಿಲ್ಲ. ಹೀಗಾಗಬಾರದು. ಮಠದ ವಿದ್ಯಾರ್ಥಿ ಹಳೆಯವನಾಗಲಿ, ಈಗಿನವನಾಗಲಿ ದುಶ್ಚಟಗಳ ದಾಸನಾಗಬಾರದು. ಅದೇ ನಮ್ಮ ಭಾವನೆ. ಭಾವ ಬಂಗಾರ ಸ್ವರೂಪಿಗಳು ನೀವು. ನಿಮ್ಮ ವೈಯಕ್ತಿಕ ಜೀವನ ಶುದ್ಧವಾಗಿರುವುದನ್ನು ಕಂಡಾಗ, ಕೇಳಿದಾಗ ನಮಗಾಗುವ ಸಂತೋಷಕ್ಕೆಣೆಯಿಲ್ಲ. ನಿಮ್ಮ ಕೌಟುಂಬಿಕ ಜೀವನವನ್ನು ಶುಭ್ರವಾಗಿಟ್ಟುಕೊಳ್ಳಿ. ಮಕ್ಕಳನ್ನು ಉದಾಸೀನ ಮಾಡಬೇಡಿ. ನಿಮ್ಮ ನಿಮ್ಮ ಕರ್ತವ್ಯದಲ್ಲಿ ಶ್ರದ್ಧೆಯಿರಲಿ, ಪ್ರಾಮಾಣಿಕತೆಯಿರಲಿ, ಭ್ರಷ್ಟಾಚಾರದಿಂದ ದೂರವಿರಿ. ಜಾತಿಯ ಜಾಡ್ಯದಿಂದ ಮುಕ್ತವಾಗಿ ಬದುಕಿರಿ. ನಿಮ್ಮಲ್ಲಿರುವ ಮಧುರ ಭಾವನೆಯನ್ನು, ಆತ್ಮೀಯ ಬಾಂಧವ್ಯವನ್ನು, ಅಭಿಮಾನದ ನಿರಂತರತೆಯನ್ನು ಕಂಡಾಗ ಸಂಸ್ಥೆ ಇನ್ನೂ ಹೆಚ್ಚು ಹೆಚ್ಚು ಸೇವೆಯನ್ನು ಮಾಡಬೇಕೆಂಬ ಅಪೇಕ್ಷೆ ನಮಗಾಗುತ್ತಿದೆ.

ನಿಜ ತೊಂಬತ್ತೈದು ನಮಗೆ ತುಂಬುತ್ತಿದೆ. ನಿಮ್ಮನ್ನೆಲ್ಲ ನೋಡಿದಾಗ ನಿಮ್ಮ ಮಾತುಗಳನ್ನು ಕೇಳಿದಾಗ, ಭಾವನೆಗಳನ್ನು ಪರಿಭಾವಿಸಿದಾಗ ತೃಪ್ತಿಯುಂಟಾಗುತ್ತದೆ. ನಿಮಗೆ ಒಂದು ಮಾತು ಹೇಳುತ್ತೇನೆ. ಶ್ರೀಮಠದಲ್ಲಿರುವ ಮಕ್ಕಳು ಪ್ರಸಾದ ಮಾಡಿಕೊಂಡು ಈಚೆಗೆ ಬರುತ್ತಿರುವುದನ್ನು, ಅವರ ಸಂತೋಷವನ್ನು ಕಂಡಾಗ ಇದಕ್ಕಿಂತ ಮಿಗಿಲಾದ ಕೈಲಾಸವಿಲ್ಲ ಎಂದುಕೊಳ್ಳುತ್ತೇನೆ.

ನೀವೆಲ್ಲ ಆಗಾಗ ಶ್ರೀಮಠಕ್ಕೆ ಬರುತ್ತಿರಬೇಕು. ನೀವೇನೂ ತರುವುದು ಬೇಡ, ಕೊಡುವುದು ಬೇಡ, ನೀವು ಬರುವುದೇ ನಮಗೊಂದು ಆನಂದ. ನಿಮ್ಮ ಭಾವಶುದ್ಧಿಯೇ ಸಂಸ್ಥೆಯ ಭವ್ಯ ಭದ್ರ ಬುನಾದಿ; ಭವಿಷ್ಯದ ಬೆಳಕೂ ಅದೇ. ಹಳೆಯ ವಿದ್ಯಾರ್ಥಿಗಳಾದ ನೀವು ಶ್ರೀಮಠದ ಹಿರಿಯ ಮಕ್ಕಳ ಏಳಿಗೆಯಲ್ಲಿ ಮಠದ ಕೀರ್ತಿ; ಕಲ್ಯಾಣ.

ಉಪಕಾರ ಸ್ಮರಣೆ ಕೃತಜ್ಞತೆಯ ಲಕ್ಷಣ; ಸುಸಂಸ್ಕೃತಿಯ ಬೆಳಕು, ಸನ್ಮಾರ್ಗಗಾಮಿಗಳಾಗಿರುವ ನಿಮಗೆಲ್ಲ ಮಂಗಳವಾಗಲಿ.

(೧೫-೧೨-೨೦೦೨ರಂದು ಶ್ರೀಮಠದಲ್ಲಿ ಹಳೇ ವಿದ್ಯಾರ್ಥಿ ಸಂಘದ ೪೮ನೇ ಮಹಾಧಿವೇಶನದಲ್ಲಿ ನೀಡಿದ ಆಶೀರ್ವಚನ ಸಂಗ್ರಹ)

❄



# ಶ್ರೀ ಸಿದ್ಧಲಿಂಗೇಶ್ವರ ವಚನ

*ಗಾಜಿನ ಮನೆಯ ಮಾಡಿಕೊಂಡು ವಿರಾಜಿಸುವ ಗೀಜಗ*
*ವೋಜನ ಕೈಯಲ್ಲಿ ಸಿಕ್ಕಿಗಾಜು ಗೋಜಾಗುತ್ತಿದೆ*
*ತನ್ನೋಜೆಯ ಮರೆಯಿತ್ತಲ್ಲಾ ಆಯ್ಯಾ !*
*ಗಾಜಿನ ಮನೆಯ ಮುರಿದು, ಓಜನ ಕೊಂದು,*
*ಗಾಜುಗೋಜುಬಿಟ್ಟು ತನ್ನ ಓಜೆಯವನರಿದಲ್ಲದೆ ಒಳಿತಿಲ್ಲ ಕಾಣಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಗಾಜಿನ ಮನೆಯೆಂದರೆ ಅನಿತ್ಯವಾದ ದೇಹ. ಗೀಜಗನೆಂದರೆ ಜೀವ. ವೋಜನೆಂದರೆ ಕಾಲ. ಕೈಯಲ್ಲಿ ಸಿಕ್ಕಿ ಗಾಜು ಗೋಜಾಗುತ್ತಿದೆ ಎಂದರೆ ಜನನ ಮರಣಗಳಲ್ಲಿ ತೊಳಲುತ್ತಿದ್ದಾನೆಂದರ್ಥ.

ಆ ಜೀವನು ಸುಜ್ಞಾನಮುಖಿಯಾಗಿ ಸಾಧನ ಚತುಷ್ಟಯ ಸಂಪನ್ನನಾಗಿ, ಗುರುಕಾರುಣ್ಯದಿಂದ ಲಿಂಗಾಂಗ ಸಂಬಂಧಿಯಾಗಿ, ಷಟ್‌ಸ್ಥಲ ಜ್ಞಾನ ಕ್ರಿಯಾಚಾರಿಯಾಗಿ, ದೇಹಭಾವವನ್ನು ಬಿಟ್ಟು, ಕಾಲನ ಅಂದರೆ ಸಾವಿನ ಭಯವನ್ನು ಗೆದ್ದು, ತಾನು ಬ್ರಹ್ಮಸ್ವರೂಪನೆಂದರಿದಲ್ಲದೆ ಲಿಂಗದಲ್ಲಿಯ ಪರಿಣಾಮ ದೊರೆಯದು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

**ಶ್ರೀವಾಣಿ**

ಪರಮಾತ್ಮನ ಪಥದಲ್ಲಿ ಪ್ರತಿದಿನವೂ ಒಂದೊಂದು ಹೆಜ್ಜೆ ಮುಂದೆ ಮುಂದೆ ಹೋಗುವ ಕೆಲಸ ಮಾಡಿದರೆ ಅದು ನಿಜವಾದ ಜೀವನ, ಅಂತಹ ವ್ಯಕ್ತಿಯೇ ನಿಜವಾದ ಮನುಷ್ಯ.

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಅಳವರಿಯದ ಶ್ರೀಘನವೆ ಕಾಂಬಲಸಾಧ್ಯವೆ
ಮಾತುಮನಮೀರಿದ ಜ್ಯೋತಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಂಗವಿಡಿದೈತಂದ ಸಂಗನ ಶ್ರೀಗುರುವೆ
ಲಿಂಗವೆ ಆಗಿರುವ ಜಂಗಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಇನ್ನೇವೆ ನಿನ್ನೇವೆ' ನಿಮ್ಮ ಚರಣವ ಬಿಡೆನು
ಮುನ್ನ ಅರಿಯದಾದೆ ಶ್ರೀ ನಿಜವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಂಜಿನ ಮೋಹರ ರವಿಕಿರಣವ ಕೆಡಿಸುವುದೆ
ನಿಮ್ಮ ಚಮ್ಮಾವುಗೆಗೆ ಧರೆಸರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕ್ಷೀರ ಸಾಗರ ನೀನು ಧೀರ ಮಂದರ ಮೇರು
ಪಾರವಿಲ್ಲದ ನೀಲ ಶುಭಬಾನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಸ್ಮಾಂಗದ ಶಿವಕಳೆಯೆ ಥಳಥಳಿಪ ಭಕ್ತಿಯೆ
ಮುಕ್ತಿಮುಖದರ್ಪಣದ ಮೂಲಿಗವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದಲಿ ಪದವುಂಟು ಲಿಂಗದಲಿ ಫಲವುಂಟು
ಜಂಗಮದಿ ಪದನಾಸ್ತಿ ಫಲನಾಸ್ತಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿರತಿ ನಿರುತವೆ ಮುಕ್ತಿಸತಿ ಚರಿತವೆ
ಬಿತ್ತಿ ಬೆಳೆಯುತಿಹತತ್ವವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀವೆ ಬಲ್ಲಿರಿ ತಂದೆ ನನ್ನೊಳಗು ಹೊರಗನು
ನೀವೆ ಕಾಂಬಿರಿತಂದೆ ಅವಗುಣವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪಾದಸ್ಪರ್ಶವಮಾಡಿ ಪಾಪಹರ ನಾನಾದೆ
ಪಾದೋದಕವ ಕೊಂಡು ಬದುಕಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ







# ಶರಣ ಚಳುವಳಿ ಎಂದರೇನು?

– ಡಾ. ಎಂ. ಚಿದಾನಂದಮೂರ್ತಿ
'ಮಿಂಚು', ೬/ಎ, ೪ನೇ ತಿರುವು,
೧೧ನೇ ಮುಖ್ಯರಸ್ತೆ, ವಿಜಯನಗರ, ౨ನೇ ಹಂತ
ಬೆಂಗಳೂರು – ೫೬೦ ೦೪೦

ಬಸವ, ಅಲ್ಲಮರ ನೇತೃತ್ವದಲ್ಲಿ ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ನಡೆದ ಸಾಮಾಜಿಕ ಕ್ರಿಯೆಯೊಂದನ್ನು 'ಶರಣ ಚಳುವಳಿ' ಎಂದು ಕರೆಯಲಾಗಿದೆ; ಹಾಗೆ ಕರೆಯುವುದು ಉಚಿತವಲ್ಲ ಹೌದು. 'ಚಳುವಳಿ'ಯು ಸಂಸ್ಕೃತದ 'ಚಲನ-ವಲನ'ದ ಒಂದು ರೀತಿಯ ತದ್ಭವ; ಇಂಗ್ಲೀಷಿನ movement ಪದಕ್ಕೆ ಸಂವಾದಿಯಾದುದು. ಸಾಮಾನ್ಯ ಜನತೆ ಹಿಂದಿನಿಂದ ಒಪ್ಪಿಕೊಂಡು ಬಂದಿರುವ ಒಂದು ವ್ಯವಸ್ಥೆಯನ್ನು ಅದು ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಯಾವುದೇ ವ್ಯವಸ್ಥೆಯಿರಬಹುದು. ಆ ವ್ಯವಸ್ಥೆಯು ಏನೇ ಆಗಿದ್ದರೂ, ಅದರಿಂದ ತಮಗೆ ಅನ್ಯಾಯವಾಗುತ್ತಿದ್ದರೂ ಅದನ್ನು ಸಹಿಸಿಕೊಂಡು, ಒಪ್ಪಿಕೊಂಡು ಮೌನ ವಹಿಸುವುದು ಸ್ವಾಭಾವಿಕ. ಆದರೆ, ಆ ವ್ಯವಸ್ಥೆ ಸ್ವಾಭಾವಿಕವಲ್ಲ. ಮನುಷ್ಯ ನಿರ್ಮಿತ, ಅದರಿಂದ ಕೆಲವರಿಗೆ ಲಾಭ, ಬಹು ಜನರಿಗೆ ನಷ್ಟ ಆಗುತ್ತಿದೆ ಎಂಬ ಅರಿವು ಮೂಡಿ ಅದನ್ನು ಮಾರ್ಪಡಿಸಬೇಕೆಂಬ ಆಲೋಚನೆ ಸಾಮೂಹಿಕವಾಗಿ ಕಾಣಿಸಿಕೊಳ್ಳುವುದೇ ಯಾವುದೇ ಚಳುವಳಿಯ ಬೀಜಾಂಕುರವಾದಂತೆ. ಸ್ತಬ್ಧವಾಗಿದ್ದ ಕೊಳದಲ್ಲಿ ಅಲೆಗಳು ಕಾಣಿಸಿಕೊಂಡಂತೆ ಆ ಜನತೆಯ ಮನಸ್ಸಿನಲ್ಲಿ ಒಂದು ಚಲನೆ, ಅದುರುವಿಕೆ, ಏರುಪೇರು ಕಾಣಿಸಿಕೊಳ್ಳುತ್ತದೆ. ಅದು ಮನಸ್ಸಿನಲ್ಲಿ ಕಾಣಿಸಿಕೊಂಡದ್ದು ಬಹಿರಂಗ ಪ್ರತಿಭಟನೆಯಾಗಿ ವ್ಯಕ್ತವಾದಾಗ ಆ ಚಲನೆಯು ಚಳುವಳಿಯೆನ್ನಿಸಿಕೊಳ್ಳುತ್ತದೆ. ಯಾವುದೇ ಚಳುವಳಿ ನಡೆಯುವುದು ಜನತೆಯ ಮನಸ್ಸಿನಲ್ಲಿ ಅದು ಚಳುವಳಿಯ ಗುಪ್ತ ರೂಪ; ವ್ಯಕ್ತರೂಪ ಆಮೇಲಿನದು.

ಯಾವುದೇ ಚಳುವಳಿ ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುವುದಿಲ್ಲ. ಜನತೆಯಲ್ಲಿ ಕಾಣಿಸಿಕೊಂಡ ಅತೃಪ್ತಿ ಅಲ್ಲಲ್ಲಿ ವ್ಯಕ್ತವಾಗುತ್ತಿದ್ದಿರಬಹುದು, ವ್ಯಕ್ತಿಗಳ ಪ್ರತಿಭಟನೆಯಲ್ಲಿ. ಆದರೆ ಒಬ್ಬ ಸೂಕ್ಷ್ಮ ಸಂವೇದನೆಯ, ಸಾಮಾಜಿಕ ಕಳಕಳಿಯ ವ್ಯಕ್ತಿ ಆ ಜನತೆಯ ಸಾಮೂಹಿಕ ವೇದನೆಯನ್ನು ತಾನೂ ಅನುಭವಿಸಿ, ಆ ಒಟ್ಟು ಅತೃಪ್ತಿಗೆ ಮುಖವಾಣಿಯಾಗಲು ಮುಂದೆ ಬಂದು ಎಲ್ಲ ಬಗೆಯ ದೈಹಿಕ, ಮಾನಸಿಕ ಯಾತನೆಗೆ ಸಿದ್ಧನಾಗುತ್ತಾನೆ. ಹಾಗೆ ಮುಂದೆ ಬರುವ ವ್ಯಕ್ತಿ ಹುಟ್ಟಿನಿಂದ ಶ್ರೀಮಂತರ, ಮೇಲ್ವರ್ಗದವರ, ಪ್ರತಿಷ್ಠಿತರ, ಸುಖಜೀವಿಗಳ, ಶೋಷಕರ ವರ್ಗಕ್ಕೆ ಸೇರಿದವನಾಗಿರುವುದು ಅನಿವಾರ್ಯ. ಅವನು ಆ ವರ್ಗಕ್ಕೆ ಸೇರಿ ಎಲ್ಲ ಬಗೆಯ ಅನುಕೂಲಗಳನ್ನು ಬದುಕಿನಲ್ಲಿ ಅನುಭವಿಸಲು ಇದ್ದ ಎಲ್ಲಾ ಅವಕಾಶಗಳನ್ನು ತಾನೇ ವಿಸರ್ಜಿಸಿ ಸರಿಯಾಗಿ ಹೇಳುವುದಾದರೆ ತ್ಯಾಗಮಾಡಿ, ಕಷ್ಟಜೀವಿಗಳ, ಶೋಷಿತರ ವರ್ಗದ ಜೊತೆ ಸಮೀಕರಿಸಿಕೊಳ್ಳುತ್ತಾನೆ. ಜನತೆ ಅವನ ನಾಯಕತ್ವವನ್ನು ಸಂತೋಷದಿಂದ ಒಪ್ಪಿಕೊಳ್ಳುತ್ತದೆ; ಅವನ ತ್ಯಾಗವನ್ನು ಗುರುತಿಸಿ ಅಲ್ಲಿಂದ ಸ್ಫೂರ್ತಿ ಧೈರ್ಯ ಉತ್ಸಾಹಗಳನ್ನು ಪಡೆಯುತ್ತದೆ; ಅವನನ್ನು ಹಿಂಬಾಲಿಸುತ್ತದೆ; ಅವನಿಂದ ಧೈರ್ಯ ಪಡೆದು ಅವನಿಗೂ ಧೈರ್ಯವನ್ನು ತಂದುಕೊಡುತ್ತದೆ.

ಬಸವಣ್ಣನವರಿಗಿಂತ (ಕ್ರಿ.ಶ. ೧೧೬೦) ಹಿಂದೆಯೇ ಕ್ರಿ.ಶ. ೧೧೦೦ರಲ್ಲಿದ್ದು ಕೊಂಡಗುಳಿ ಕೇಶಿರಾಜ ಎಂಬ ವ್ಯಕ್ತಿಯ ಬದುಕಿನ ಕೆಲ ವಿವರಗಳು ಪರಿಶೀಲನ ಯೋಗ್ಯ. ಅವನು ಅಂದಿನ ಇಡೀ ಭಾರತದಲ್ಲೇ ಪ್ರಖ್ಯಾತವಾಗಿದ್ದ ಕಲ್ಯಾಣ ಚಾಲುಕ್ಯ ವಂಶದ ಆರನೆಯ ವಿಕ್ರಮಾದಿತ್ಯನ ಬಳಿ ಮಂತ್ರಿಯಾಗಿದ್ದ; ಅವನು ನಿಷ್ಠಾವಂತ, ತೀವ್ರ ಶಿವಭಕ್ತಿಯ 'ವೀರ'ಶೈವನಾಗಿದ್ದ. ಅವನು ಮಂತ್ರಿಯಾಗಿದ್ದರೂ ಶಿವನಲ್ಲದೆ ಬೇರೆ ದೈವಕ್ಕೆ, ಶಿವಭಕ್ತರಲ್ಲದ ಅನ್ಯರಿಗೆ ಕೈ ಮುಗಿಯುವುದಿಲ್ಲ. ಅವನು ಆಸ್ಥಾನಕ್ಕೆ ಬಂದು ವಿಕ್ರಮಾದಿತ್ಯನ ಮುಂದೆ ಬಾಗಿ ನಮಸ್ಕರಿಸಿದಂತೆ ಕಂಡರೂ ವಾಸ್ತವವಾಗಿ ಅವನು ನಮಸ್ಕರಿಸುತ್ತಿದ್ದುದು ತನ್ನ ಬೆರಳು ಉಂಗುರದ ನಂದಿ ಮುದ್ರೆಗೆ. ಇದು ರಾಜನಿಗೆ ಗೊತ್ತಾಗಿ ಅವನು ಆ ಉಂಗುರವನ್ನು ಅವನಿಂದ ತೆಗೆದುಕೊಂಡಾಗ ರಾಜನಿಗೆ ಬಾಗಲೊಲ್ಲದ ಕೇಶಿರಾಜನು ಲಾಭದಾಯಕ, ಅಧಿಕಾರಸ್ಥಾನದ ಮಂತ್ರಿಪದವಿಯನ್ನು ತ್ಯಜಿಸಿ ತನ್ನ ಹೆಂಡತಿ ಗಂಗಾಂಬಿಕೆ ಜೊತೆ ಕಲ್ಯಾಣದ ಹೊರಗಿನ ದಲಿತವರ್ಗದ ಮೇದರವನ ಮನೆಗೆ ಹೋಗಿ ಅಲ್ಲಿ ಶಿವಪೂಜಾ ನಿರತನಾಗುತ್ತಾನೆ. ಆ ಬಳಿಕ ರಾಜನಿಗೆ ಪಶ್ಚಾತ್ತಾಪವಾಗಿ ಮತ್ತೆ ಮಂತ್ರಿ ಪದವಿಗೆ ಆಹ್ವಾನಿಸುತ್ತಾನೆ.

ಕೇಶಿರಾಜನ ಸಮಕಾಲೀನರಾದ ತೆಲುಗು ಬೊಮ್ಮಯ್ಯ, ಕೆಂಭಾವಿ ಭೋಗಣ್ಣ ಇವರೂ ಕೂಡ ಅದೇ ರೀತಿ ನಡೆದುಕೊಂಡ ಶಿವಭಕ್ತರು; ಅವರಿಗೆ ಶಿವಭಕ್ತಿಯ ಮುಂದೆ ಜಾತಿಗಳ ಅಸಮಾನತೆ ಕ್ಷುದ್ರವಾಗಿ ಕಾಣುತ್ತಿತ್ತು. ಒಂದು ರೀತಿ ಅವರೂ ಪ್ರಭುತ್ವವನ್ನು ಧಿಕ್ಕರಿಸಿ ನಿಂತವರು. ಅವರೆಲ್ಲ ಆಗಲೇ ಹನ್ನೊಂದನೇ ಶತಮಾನದಲ್ಲಿ ಜಾತಿಗಳ ಅಸಮಾನತೆ ಬಗ್ಗೆ ಮೇಲ್ಜಾತಿಯವರು ಕೆಳಜಾತಿಯವರನ್ನು ಕಡೆಗಣಿಸುತ್ತಿದ್ದುದರ ಬಗ್ಗೆ ಅಲ್ಲಲ್ಲಿ ಬಿಡಿಬಿಡಿಯಾಗಿ ವ್ಯಕ್ತವಾಗುತ್ತಿದ್ದ ಜನರ ಅತೃಪ್ತಿ

ಸಮಾಧಾನ ಕೋಪಗಳ ಸಂಕೇತವಾಗಿ ನಿಲುತ್ತಾರೆ. ಬಸವನ ಹಿರಿಯ ಸಮಕಾಲೀನ ಜೇಡರ ದಾಸಿಮಯ್ಯ ಕನ್ನಡದಲ್ಲಿ ವಚನಗಳನ್ನೂ ಬರೆದಿದ್ದ.

ಈ ಹಿನ್ನೆಲೆಯಲ್ಲಿ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿ, ಅದನ್ನು ಧಿಕ್ಕರಿಸಿ ವೀರಶೈವ ಧರ್ಮವನ್ನು ಅಂಗೀಕರಿಸಿದ ರಾಜ ಬಿಜ್ಜಳನ ಬಳಿ ಭಂಡಾರಿಯಾಗಿದ್ದರೂ ತನ್ನನ್ನು ಬಡವರ ಜೊತೆ, ಕೆಳವರ್ಗದವರ ಜೊತೆ ತನ್ನನ್ನು ಸಂಪೂರ್ಣ ಗುರುತಿಸಿಕೊಂಡ ಬಸವಣ್ಣ ಕಾಣಿಸಿಕೊಂಡದ್ದು ಅರ್ಥಪೂರ್ಣವಾಗಿ ಕಾಣುತ್ತವೆ. ಅವನ ಛಲ, ತ್ಯಾಗಬುದ್ಧಿ, ಬಡವರ ಬಗ್ಗೆ ಅನುಕಂಪ, ಅಕೃತಕ ವಿನಯ, ನಿರ್ಮಲ ಶಿವಭಕ್ತಿ – ಇವು ಅವನತ್ತ ಜನ ಧಾವಿಸುವಂತಾಯಿತು. ಅವನಿದ್ದ ಕಲ್ಯಾಣಕ್ಕೆ ಸಾವಿರಾರು ಜನ, ಕರ್ನಾಟಕದ ಎಲ್ಲೆಡೆಗಳಿಂದ ಮಾತ್ರವಲ್ಲ, ಭಾರತದ ಮೂಲೆ ಮೂಲೆಗಳಿಂದ ಧಾವಿಸಿದರು; ಆ ಜನ ತಮ್ಮ ಜಾಗಗಳಿಗೆ ಹಿಂದಿರುಗಿ ಇತರರ ಜೊತೆ ತಮ್ಮ ಅನುಭವಗಳನ್ನು ಹಂಚಿಕೊಂಡರು. ಅನೇಕರು ಬಸವಣ್ಣನವರನ್ನು ಕಾಣದಿದ್ದರೂ ಅವರ ಬದುಕು, ವಚನಗಳಿಂದ ಪ್ರಭಾವಿತರಾದರು. ತಮ್ಮ ಅನುಭವಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಸಿ ಕನ್ನಡ ಭಾಷೆ, ಸಾಹಿತ್ಯಗಳನ್ನು ಶ್ರೀಮಂತಗೊಳಿಸಿದರು. ರೈತರು, ದಲಿತರು, ಗಾಣಿಗರು, ಅಗಸರು, ಕ್ಷೌರಿಕರು, ನೇಕಾರರು, ಅಂಬಿಗರು ಇತ್ಯಾದಿ ಹಲವು ಜಾತಿಗಳಿಗೆ ಸೇರಿದ ಜನರ ಆತ್ಮವಿಶ್ವಾಸ ಹೆಚ್ಚಿತು. ಮಂಕು ಕವಿದಿದ್ದ ಅವರ ಬದುಕಿನಲ್ಲಿ ವಿದ್ಯುತ್ ಸಂಚಾರವಾಯಿತು. ಮಹಿಳೆಯರಲ್ಲಿಯೂ ಅಪೂರ್ವ ಜಾಗೃತಿ ಮೂಡಿತು. ಭಾರತದ ಚರಿತ್ರೆಯಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ ಇನ್ನೂರಕ್ಕೂ ಮೇಲ್ಪಟ್ಟು ಸಾಹಿತಿಗಳು, ಬಹುಸಂಖ್ಯೆಯ ಮಹಿಳೆಯರು ಇಷ್ಟು ಸಂಖ್ಯೆಯಲ್ಲಿ ಕಾಣಿಸಿರಲಿಲ್ಲ. ದಲಿತ ವರ್ಗದ ಉರಿಲಿಂಗಪೆದ್ದಿ, ಕಾಳವ್ವೆ ದಂಪತಿಗಳಂಥವರು ಸಂಸ್ಕೃತವನ್ನು ಕಲಿತದ್ದು ಮಾತ್ರವಲ್ಲ, ಆ ವರ್ಗಕ್ಕೆ ನಿಷೇಧಿಸಲಾಗಿದ್ದ ವೇದಾಧ್ಯಯನವನ್ನು ಮಾಡಿ ಅದರಲ್ಲಿ ನಿಷ್ಣಾತರಾದರು. ಅಸ್ಪೃಶ್ಯರು ಸ್ಪೃಶ್ಯರಾದುದು ಮಾತ್ರವಲ್ಲ, ಉಳಿದ ಶಿವಭಕ್ತರು ಬರೀ 'ಮಾಹೇಶ್ವರ'ರೆಂದು ಕರೆಯಿಸಿಕೊಂಡರೆ ಅವರನ್ನು, ದಲಿತ ಶಿವಭಕ್ತರನ್ನು 'ಹಿರಿಯ ಮಾಹೇಶ್ವರ'ರೆಂದು ಗೌರವಿಸಿದರು. ಅವರು ಕಸ ಗುಡಿಸಲು ನಗರದೊಳಕ್ಕೆ ಹೋದಾಗ 'ಸಂಬೋಳಿ' ಎಂದು ಕೂಗುವುದನ್ನು ನಿಲ್ಲಿಸಿದರು. ಅವರೆಲ್ಲಾ ಆತ್ಮವಿಶ್ವಾಸದಿಂದ ತಮ್ಮ ತಮ್ಮ ವೃತ್ತಿಗಳಲ್ಲಿ ತೊಡಗಿಸಿಕೊಂಡು ಶ್ರಮಿಸಿ ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಂಡರು.

ಆ ಚಳುವಳಿಯ ವಿವರಗಳು ಜನತೆಗೆ ಈಗ ತಿಳಿದಿವೆ. ಆ ಚಳುವಳಿಯನ್ನು ಒಟ್ಟು ಚಳುವಳಿಯ ಸ್ವರೂಪದ ಸಾಮಾನ್ಯ ಹಿನ್ನೆಲೆಯಲ್ಲಿ ನೋಡಿದಾಗ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಗೋಚರಿಸುವುದನ್ನು ಸೂಚಿಸುವುದು ಈ ಕಿರು ಲೇಖನದ ಉದ್ದೇಶ.



## ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಪಂಪ ಪ್ರಶಸ್ತಿ



ಶ್ರೇಷ್ಠ ಸಂಶೋಧಕರೂ, ವಿದ್ವಾಂಸರೂ, ಭಾಷಾತಜ್ಞರೂ ಆದ ಡಾ. ಎಂ. ಚಿದಾನಂದಮೂರ್ತಿಯವರು ''ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'', ''ಶೂನ್ಯ ಸಂಪಾದನೆಯನ್ನು ಕುರಿತು'', ''ಭಾಷಾ ವಿಜ್ಞಾನದ ಮೂಲ ತತ್ವಗಳು'', 'ಗ್ರಾಮೀಣ'', ''ಸಂಶೋಧನ ತರಂಗ'', ''ಕನ್ನಡ ಸಂಸ್ಕೃತಿ ನಮ್ಮ ಹೆಮ್ಮೆ'' ಇತ್ಯಾದಿ ೧೭ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ೨೫೦ಕ್ಕ ಹೆಚ್ಚು ಸಂಶೋಧನಾ ಪ್ರಬಂಧಗಳನ್ನು ಬರೆದಿದ್ದಾರೆ. ''ಕನ್ನಡ ಸಂಸ್ಕೃತಿ – ನಮ್ಮ ಹೆಮ್ಮೆ'' ಒಂಬತ್ತು ಭಾಷೆಗಳಿಗೆ ಅನುವಾದವಾಗಿದೆ. ಐವತ್ತಕ್ಕೂ ಹೆಚ್ಚು ರಾಷ್ಟ್ರೀಯ, ಅಂತರಾಷ್ಟ್ರೀಯ ಸಮ್ಮೇಳನಗಳು, ವಿಚಾರಗೋಷ್ಠಿಗಳಲ್ಲಿ ಭಾಗವಹಿಸಿದ ಹೆಗ್ಗಳಿಕೆ ಇವರದು. ಆರು ಕೃತಿಗಳಿಗೆ ಬಹುಮಾನ ಬಂದಿದೆ. ಅಮೇರಿಕಾದ ಚಿಕಾಗೋ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿದ್ದಾರೆ. ಕನ್ನಡ ಚಳುವಳಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಸ್ವಯಿಚ್ಛೆಯಿಂದ ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತಿ ಹೊಂದಿರುವ ಡಾ. ಮೂರ್ತಿ ಅವರು ಕನ್ನಡ ಶಕ್ತಿ ಕೇಂದ್ರದ ಕಾರ್ಯಾಧ್ಯಕ್ಷರಾಗಿದ್ದಾರೆ. ಸಂಶೋಧನಾ ಕ್ಷೇತ್ರದಲ್ಲಿ ಸಲ್ಲಿಸಿದ ಗಣನೀಯ ಸೇವೆಗಾಗಿ ರಾಜ್ಯೋತ್ಸವ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳನ್ನು ಪಡೆದ ಗೌರವ ಇವರದು. ಕನ್ನಡ ನಿಘಂಟು ಸಂಪಾದಕ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯ ಸಂಶೋಧನೆ ಚಳುವಳಿಯಲ್ಲಿ ಸದಾ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವ ಡಾ. ಎಂ. ಚಿದಾನಂದಮೂರ್ತಿ ಅವರಿಗೆ ಪ್ರತಿಷ್ಠಿತ ಪಂಪ ಪ್ರಶಸ್ತಿ ನೀಡಿ ಗೌರವಿಸಿರುವುದು ಅವರ ಪ್ರತಿಭೆಗೆ ಸಂದ ಪುರಸ್ಕಾರ. ಅವರಿಗೆ 'ಸಿದ್ಧಗಂಗಾ' ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.





## ಬೆಳಗಾವಿಯಲ್ಲಿ ನಡೆಯುವ ಅಖಿಲ ಭಾರತ ಎಪ್ಪತ್ತನೆಯ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಡಾ. ಪಾಟೀಲ್ ಪುಟ್ಟಪ್ಪ



ಸಾಹಿತಿಯಾಗಿ, ಪತ್ರಕರ್ತರಾಗಿ, ಪತ್ರಿಕೋದ್ಯಮಿಗಳಾಗಿ, ಚಳುವಳಿಗಾರರಾಗಿ, ಚಿಂತಕರಾಗಿ, ರಾಜಕಾರಣಿಯಾಗಿರುವ ಶ್ರೀ ಪಾಟೀಲ ಪುಟ್ಟಪ್ಪ ಅವರು ಪರಿಚಿತವಲಯದಲ್ಲಿ 'ಪಾಪು' ಎಂದೇ ಜನಪ್ರಿಯರಾಗಿದ್ದಾರೆ. ಜನವರಿ ೧೪, ೧೯೨೧ರಲ್ಲಿ ರಾಣೆಬೆನ್ನೂರು ತಾಲ್ಲೂಕಿನ ಹಲಗೇರಿಯಲ್ಲಿ ಜನಿಸಿ ಬೆಳಗಾವಿಯಲ್ಲಿ ಎಲ್.ಎಲ್.ಬಿ. ಪದವಿಯನ್ನು ಪಡೆದರು. ಇವರ ಒಲವು ವಕೀಲಿ ವೃತ್ತಿಗಿಂತ ಪತ್ರಕರ್ತರಾಗಬೇಕೆಂಬುದು ಅವರಲ್ಲಿ ತುಡಿಯುತ್ತಿದ್ದ ಉತ್ಕಟವಾದ ಬಯಕೆ ಅವರನ್ನು ಒಬ್ಬ ಪ್ರಖ್ಯಾತ ಪತ್ರಕರ್ತರನ್ನಾಗಿ ಮಾಡುವಲ್ಲಿ ಸಹಕಾರಿಯಾಯಿತು. 'ವಿಶ್ವವಾಣಿ' ದಿನ ಪತ್ರಿಕೆ ಹಾಗೂ 'ಪ್ರಪಂಚ' ಸಾಪ್ತಾಹಿಕ ಪತ್ರಿಕೆಗಳನ್ನು ಪ್ರಾರಂಭಿಸಿ ಅದರ ಸಂಪಾದಕರಾಗಿ ಕಳೆದ ಅನಕ ದಶಕಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ. ೧೯೬೨-೧೯೭೪ರ ವರೆಗೆ ರಾಜ್ಯಸಭಾ ಸದಸ್ಯರಾಗಿ ಒಬ್ಬ ಉತ್ತಮ ಸಂಸದೀಯ ಪಟು ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಕನ್ನಡ ಕಾವಲು ಸಮಿತಿಯ ಅಧ್ಯಕ್ಷರಾಗಿ ದಕ್ಷತೆಯಿಂದ ಸೇವೆಸಲ್ಲಿಸಿ ರಾಜ್ಯದ ಗಡಿಭಾಗದಲ್ಲಿ ಕನ್ನಡ ವಾತಾವರಣ ಮೂಡುವಂತೆ ಮಾಡುವಲ್ಲಿ ಯಶಸ್ವಿಯಾದರು. ಕರ್ನಾಟಕ ಸರ್ವಾಂಗೀಣ ಅಭಿವೃದ್ಧಿಗಾಗಿ ಕನ್ನಡ ಉಳುವಿಗಾಗಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ.

'ನಾಡಿನ ಮೇಜವಾನಿ', 'ಗವಾಕ್ಷಿ ತೆರೆಯಿತು', 'ಶಿಲಾಬಾಲಿಕೆ ನುಡಿದಳು', 'ನನ್ನೂರು ಈ ನಾಡು'. 'ಹೊಸದನ್ನು ಕಟ್ಟೋಣ' 'ನಾವು ಬದುಕುವ ಮಾತು', 'ನೆಲದ ನಕ್ಷತ್ರಗಳು' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಪ್ರತಿಭಾವಂತ ಸಾಹಿತಿ-ಪತ್ರಕರ್ತರಾದ ಡಾ. ಪಾಟೀಲ್ ಪುಟ್ಟಪ್ಪ ಅವರು ಬೆಳಗಾವಿಯಲ್ಲಿ ನಡೆಯುವ ಅಖಿಲ ಭಾರತ ಎಪ್ಪತ್ತನೆಯ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಯಾದ ಈ ಶುಭ ಸಂದರ್ಭದಲ್ಲಿ 'ಸಿದ್ಧಗಂಗಾ' ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

## ಬಾಗಲಕೋಟೆಯಲ್ಲಿ ನಡೆಯುವ ಏಳನೆಯ ಅಖಿಲ ಭಾರತ ಶರಣ ಸಮ್ಮೇಳನಾಧ್ಯಕ್ಷರಾಗಿ ಡಾ. ಎಂ.ಎಂ. ಕಲಬುರ್ಗಿ



ಖ್ಯಾತ ಸಂಶೋಧಕರೂ, ವಿದ್ವಾಂಸರೂ ಆದ ಡಾ. ಎಂ.ಎಂ. ಕಲಬುರ್ಗಿ ಅವರು ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಥಮ ರ್‍ಯಾಂಕ್‌ನೊಂದಿಗೆ ಕನ್ನಡ ಎಂ.ಎ. ಪದವಿಯನ್ನು ಪಡೆದ ಪ್ರತಿಭಾವಂತರು. ಇವರು ಬರೆದ 'ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ' ಮಹಾಪ್ರಬಂಧಕ್ಕೆ ಡಾಕ್ಟರೇಟ್ ಪದವಿ ದೊರೆತಿದೆ. ಶಾಸನ ಸಂಪದ, ಶಾಸನಗಳಲ್ಲಿ ಶಿವಶರಣರು, ಶಾಸನ ವ್ಯಾಸಂಗ, ಶಬ್ದ ಮಣಿದರ್ಪಣ ಸಂಗ್ರಹ ಮುಂತಾದ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ಅವರ 'ಮಾರ್ಗ' ಸಂಶೋಧನಾ ಗ್ರಂಥಕ್ಕೆ ೧೯೮೮ರ ವಿಶೇಷ ಪುರಸ್ಕಾರ ದೊರೆತಿದೆಯಲ್ಲದೆ, ವಿಮರ್ಶಕರ ಗಮನ ಸೆಳೆದ ಪ್ರೌಢ ಗ್ರಂಥವಾಗಿದೆ. 'ಶಾಸನಗಳಲ್ಲಿ ಶಿವಶರಣರು' ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿದೆ. ಶ್ರೀ ಜಯಚಾಮರಾಜ ಒಡೆಯರ ಪಾರಿತೋಷಕವನ್ನೂ ಪಡೆದಿರುವ ಡಾ. ಕಲಬುರ್ಗಿ ಅವರು ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯದರ್ಶಿಯಾಗಿ, ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟಿದ್ದಾರೆ. ಜನವರಿಯಲ್ಲಿ ಬಾಗಲಕೋಟೆಯಲ್ಲಿ ನಡೆಯುವ ಏಳನೆಯ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇನಾಧ್ಯಕ್ಷರಾಗಿ ಆಯ್ಕೆಯಾಗಿರುವುದು ಔಚಿತ್ಯಪೂರ್ಣವಾಗಿದೆ. ಈ ಸಂದರ್ಭದಲ್ಲಿ ಡಾ. ಎಂ.ಎಂ. ಕಲಬುರ್ಗಿ ಅವರಿಗೆ 'ಸಿದ್ಧಗಂಗಾ' ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಕಾಯಕವೇ ಕೈಲಾಸ

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ.



ದೂರವಾಣಿ : 282211
ಫ್ಯಾಕ್ಸ್ 0816-282511

ಕ್ರ. ಸಂ. 1633/2002-03

ದಿನಾಂಕ : 9-12-2002

## ಸಂತಾಪ

ರಾಜ್ಯದ ಮಾಜಿ ಮಂತ್ರಿಗಳಾಗಿದ್ದ ಸರಳ ಹಾಗೂ ಸಾತ್ವಿಕ ಸ್ವಭಾವದ ಶ್ರೀ ನಾಗಪ್ಪನವರ ದುರಂತ ಸಾವನ್ನು ತಿಳಿದು ನಮಗೆ ಅತೀವ ವಿಷಾದವಾಗಿರುತ್ತದೆ. ಹೀಗಾಗುತ್ತದೆಂದು ನಾವು ತಿಳಿದುಕೊಂಡಿರಲಿಲ್ಲ. ವೀರಪ್ಪನ್ ಕೈಯಿಂದ ಸುರಕ್ಷಿತವಾಗಿ ಬಿಡುಗಡೆಯಾಗಿ ಹಿಂದಕ್ಕೆ ಬರುತ್ತಾರೆಂದು ನಂಬಿದ್ದೆವು. ಆದರೀಗ ಅತ್ಯಂತ ದುರ್ಭರ ಸಂಗತಿಯ ಪರಿಸ್ಥಿತಿಯು ಉಂಟಾಗಿದೆ. ಈ ಸಂದರ್ಭದಲ್ಲಿ ಅವರ ಕುಟುಂಬ ವರ್ಗದವರಿಗೆ ಯಾವ ರೀತಿಯಲ್ಲಿ ಸಾಂತ್ವನ ಹೇಳಬೇಕೆಂಬುದೇ ತೋಚದಾಗಿದೆ. ಆದರೂ ದುಃಖವನ್ನು ಸಹಿಸಿಕೊಳ್ಳಬೇಕಾದ ಅನಿವಾರ್ಯ ಪ್ರಸಂಗ ಇದಾಗಿದೆ.

ಶ್ರೀ ನಾಗಪ್ಪ ಅವರ ಸಾವಿನಿಂದ ಇಡೀ ರಾಜ್ಯದ ಜನತೆ ದುಃಖ ಮತ್ತು ಅಸಮಾಧಾನಕ್ಕೆ ಈಡಾಗಿರುವುದು ಸಹಜ ಹಾಗೂ ಸ್ವಾಭಾವಿಕ. ಇಂಥ ಸಂದರ್ಭಗಳಲ್ಲಿ ಸಂಯಮ ಅತ್ಯಂತ ಅವಶ್ಯಕ.

ದಯಾಮಯನಾದ ಪರಶಿವನು ದಿವಂಗತರ ಆತ್ಮಕ್ಕೆ ಶಾಂತಿಯನ್ನೂ ಮತ್ತು ಅವರ ಕುಟುಂಬ ವರ್ಗದವರಿಗೆ, ಅಭಿಮಾನಿಗಳಿಗೆ ಮತ್ತು ಹಿತೈಷಿಗಳಿಗೆ ಉಂಟಾಗಿರುವ ನೋವನ್ನೂ ಸಹಿಸಿಕೊಳ್ಳುವ ಶಕ್ತಿಯನ್ನು ಅನುಗ್ರಹಿಸಲೆಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಶ್ರೀ ಸಿದ್ಧಗಂಗಾ ಮಠ

## ಸಾತ್ವಿಕ ರಾಜಕಾರಣಿ ಮಾಜಿ ಸಚಿವ ಶ್ರೀ ನಾಗಪ್ಪನವರು



ಸರಳತೆ, ಸಜ್ಜನಿಕೆ, ಸಹೃದಯತೆ, ಪ್ರಾಮಾಣಿಕತೆಗೆ ಹೆಸರಾಗಿದ್ದ ಮಾಜಿ ಸಚಿವ ಶ್ರೀ ನಾಗಪ್ಪನವರು ನಾಡು ಕಂಡ ಅಪರೂಪದ ರಾಜಕಾರಣಿಗಳಲ್ಲಿ ಒಬ್ಬರು. ಅಧಿಕಾರ, ಕೀರ್ತಿಯ ಬೆನ್ನತ್ತದೆ, ತಮಗೆ ದೊರೆತ ಅವಕಾಶವನ್ನು ಸದುಪಯೋಗಪಡಿಸಿಕೊಂಡು ಸಮಾಜ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡ ಅಪ್ಪಟ 'ಸಮಾಜ ಸೇವಕ'. ಅವರು ಇತರರಿಗೆ ಮಾರ್ಗದರ್ಶಕ ರಾಗಿ ಬದುಕಿದವರು. ಯಾರಿಗೂ ಕೇಡನ್ನು ಬಯಸದೆ ಎಲ್ಲರನ್ನು 'ಇವ ನಮ್ಮವ ಇವ ನಮ್ಮವ' ಎಂದು ಅಪ್ಪಿಕೊಂಡು ಜೀವನ ನಡೆಸುತ್ತಿದ್ದ ಮೃದು ಸ್ವಭಾವದ ನಾಗಪ್ಪನವರನ್ನು ನರಹಂತಕ ವೀರಪ್ಪನ್ ಅಪಹರಿಸಿಕೊಂಡು ಹೋದುದು ಒಂದು ಇತಿಹಾಸ. ಅವರು ನರಹಂತಕನಿಂದ ಬಿಡುಗಡೆ ಹೊಂದಿ ಬರುತ್ತಾರೆಂಬ ಅಭಿಮಾನಿಗಳ, ಸ್ನೇಹಿತರ, ಕುಟುಂಬದವರ ಭರವಸೆ ಹುಸಿಯಾಗಿ ಹಂತಕರಿಗೆ ಬಲಿಯಾಗಿ ಹುತಾತ್ಮರಾದುದು ಊಹಿಸಲಾಗದ ದುರಂತ. ಅವರ ಸಾವು ಸಮಾಜಕ್ಕಾದ ದೊಡ್ಡ ನಷ್ಟ. ದಯಾಮಯನಾದ ಪರಶಿವ ಅವರ ಆತ್ಮಕ್ಕೆ ಶಾಂತಿಯನ್ನು, ಅವರ ಕುಟುಂಬ ವರ್ಗಕ್ಕೆ ಅವರ ಅಗಲಿಕೆಯ ದುಃಖವನ್ನು ಸಹಿಸಿಕೊಳ್ಳುವ ಶಕ್ತಿಯನ್ನು ಕರುಣಿಸಲೆಂದು 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.







# ಮಕರ ಸಂಕ್ರಾತಿ

**ಎಂ.ಜಿ. ನಾಗರಾಜ್**
ಸಂಪಾದಕರು, ಮಹಾಮನೆ
221, 68ನೇ ಕ್ರಾಸ್, 5ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು-560 010

**ಚಾಂ**ದ್ರಮಾನ ಪುಷ್ಯಮಾಸದ ಜನವರಿ ೧೪ರ ಸಂಕ್ರಾಂತಿ ಎಳ್ಳುಬೆಲ್ಲದ, ಸುಗ್ಗಿಯ, ಬೇಸಾಯಗಾರರ, ಗೋಪೂಜೆಯ ಹಬ್ಬ; ಮುಖ್ಯವಾಗಿ ಸೂರ್ಯಾರಾಧನೆಯ ಹಬ್ಬ. ವ್ಯಕ್ತಿ ಹಾಗೂ ಸಮುದಾಯಕ್ಕೆ ಸಂತೋಷ ಕೊಡುವ ಲವಲವಿಕೆ ತರುವ ಸಾಂಸ್ಕೃತಿಕ ಕಾಯಕ ಈ ಹಬ್ಬದಲ್ಲಿದೆ.

ಸೂರ್ಯ ಮಕರರಾಶಿಗೆ ಪ್ರವೇಶಿಸುವ ದಿನವೆ ಮಕರ ಸಂಕ್ರಾತಿ ಎನ್ನುತ್ತಾರೆ. ಉತ್ತರದತ್ತ ಹೊರಳುವ ಅವನ ಆರಂಭ ದಿಸೆಯನ್ನು ಸೂಚಿಸುವ ಕಾರಣ ಉತ್ತರಾಯಣ ಸಂಕ್ರಾಂತಿ ಎನ್ನುತ್ತಾರೆ. ಈ ಹಬ್ಬದಲ್ಲಿ ಎಳ್ಳಿನ ವಿವಿಧ ಬಗೆಯ ಬಳಕೆಯ ಕಾರಣ ತಿಲ ಸಂಕ್ರಾಂತಿ, ಎಳ್ಳು ಸಂಕ್ರಾಂತಿ ಎಂದೂ ಕರೆಯುವುದುಂಟು. ಸಂಕ್ರಮಣ ಎಂದರೆ ಒಟ್ಟಿಗೆ ಸಾಗುವುದು. ಸಂಕ್ರಮಣ ಕಾಲ ಎಂದರೆ ಸಂಧಿಕಾಲ, ಪರ್ವಕಾಲ, ಸೂರ್ಯರಾಶಿಯಿಂದ ರಾಶಿಗೆ ದಾಟುವ ದಿನ ಸಂಕ್ರಾತಿ ದಿನವಾಗಿರುವ ಕಾರಣ ಈ ಅರ್ಥಗಳೆಲ್ಲ ಇವೆ.

ಸಿಂಧೂ ಸಂಸ್ಕೃತಿಯ ನಮ್ಮ ಜನರು ೫ ಸಾವಿರ ವರ್ಷಗಳ ಹಿಂದೆಯೆ ಭಾರತದ ಪ್ರಮುಖ ಬೆಳೆಯಾಗಿ ಎಳ್ಳನ್ನು ಬೆಳೆದು, ರಫ್ತು ಮಾಡುತ್ತಿದ್ದರು. ಎಳ್ಳು ಅವರ ಬದುಕಿನ ಅಂಗವಾಗಿತ್ತು. ಹೀಗಾಗಿ ಎಳ್ಳು ಬೆಲ್ಲವನ್ನು ಸಂಕ್ರಾಂತಿಯ ಪರ್ವ ಸಮಯದಲ್ಲಿ ಕೊಡುವುದು ಭಾರತದ ಸಿಂಧೂ ಸಂಸ್ಕೃತಿಯ ಕಾಲದಿಂದಲೇ ಬಂದ ಪದ್ಧತಿ ಎನ್ನಬಹುದು. ಎಳ್ಳು, ಕಡಲೆಬೀಜ ಬೆಲ್ಲದ ಮಿಶ್ರಣದ ರುಚಿ ಬಹಳ ಸ್ವಾದಿಷ್ಟವಾಗಿದೆ. ಚಳಿಗೆ ಮುದ್ದೆಯಾಗಿದ್ದ ದೇಹ ಈ ರುಚಿ ದಿನಿಸು ಸವಿದು ಸಂಕ್ರಾಂತಿ ಸೂರ್ಯನ ಚುಮು ಚುಮು ಬಿಸಲಿನ ಶಾಖದಲ್ಲಿ ಉಲ್ಲಾಸದಿಂದ ಅರಳುತ್ತದೆ.

ಎಳ್ಳು ಬೆಲ್ಲ ಕೊಟ್ಟು ಒಳ್ಳೆಯ ಮಾತಾಡು ಎಂಬ ಕನ್ನಡದ ಸುಪ್ರಸಿದ್ಧ ನಾಣ್ನುಡಿ ಇದೆ. ಈ ಜಾನಪದ ಆಶಯದಲ್ಲಿ ಸಂಘರ್ಷವನ್ನು ತಪಿಸಿ ಸಾಮರಸ್ಯ ಸಾಧಿಸುವ ಇಚ್ಛೆ ಇದೆ. ವಿರಸದಿಂದ ಸಮರಸಕ್ಕೆ ಸಾಗುವ ಹದವಿದೆ. ಇದೊಂದು ಭಾಷಾ ಸೊಗಸು; ಸಾಂಸ್ಕೃತಿಕ ನಿವೇದನೆ; ಶುಭ ಹಾರೈಕೆ ಆಗಿದೆ. ಎಳ್ಳು ಬೆಲ್ಲ ನೀಡುವುದು ಈ ಹದದ ಹಾರೈಕೆಯ ಕುರುಹಾಗಿದೆ. ಬದಲಾವಣೆ ತರುವ ಶುಚಿರುಚಿ ಸಂದರ್ಭವಾಗಿದೆ. 'ರಾಮಾಯಣ ದರ್ಶನಂ' ಅಂತೇ ಜಗತ್ತಿನ ಎದೆಯ ಪರಿವರ್ತನೆಯ ಪುಣ್ಯ ಸಂಕ್ರಾತಿ ಎಂಬ ಸೂಚನೆ ಇತ್ತಿದೆ. ಬಸವಣ್ಣನವರೂ ಸಂಕ್ರಾಂತಿಯ ವೆಗ್ಗಳಿಯ ಬಗ್ಗೆ ಹೇಳಿದ್ದಾರೆ.

ಈ ಸೂರ್ಯಾರಾಧನೆ ಹಬ್ಬದಲ್ಲಿ 'ಸಂಕ್ರಾಂತಿ ಪುರುಷ' ಎಂದು ಮಿಶ್ರ, ಘೋಷ, ಇತ್ಯಾದಿ ಹೆಸರುಗಳನ್ನು ವರ್ಷಾನುಕ್ರಮವಾಗಿ ಅವನಿಗೆ ಆರೋಪಿಸುವುದುಂಟು. ೨೦೦೩ನೇ ವರ್ಷದ ಸಂಕ್ರಾಂತಿ ಪುರುಷನ ಹೆಸರು 'ಮಹೋದರಿ' ಎಂಬ ಸಂಕ್ರಾಂತಿ ಕುಶಲ ದ್ವೀಪದಲ್ಲಿ ಹುಟ್ಟಿ ಗೋದಾವರಿ ನದಿಯಲ್ಲಿ ಮಿಂದು, ಶ್ವೇತವಸ್ತ್ರ ಧರಿಸಿ ಕಸ್ತೂರಿಗಂಧ, ನವಣೆ ಅಕ್ಷತೆ, ಸುರಗಿ ಹೂವು, ಹವಳದ ಆಭರಣ ಧರಿಸಿ ಚಿನ್ನದ ಪಾತ್ರೆಯಲ್ಲಿ ಉಂಡು ಸಿಂಹದ ಮೇಲೆ ಕುಳಿತು ಪೂರ್ವದಿಕ್ಕಿಗೆ ಹೋಗುತ್ತಾಳೆ. ಭಾರತೀಯ ನಂಬುಗೆಯ ರೀತ್ಯಾ ಜಗತ್ತಿನ ಯಾವ ಭಾಗದಲ್ಲಿಯಾದರೂ ಇವನು ಹುಟ್ಟಬಹುದು. ಭಾರತದ ನದಿಗಳಲ್ಲಿ ಮಿಂದು, ಧರಿಸುವ ವಸ್ತ್ರ ಏರುವ ಪ್ರಾಣಿ, ಬಳಸುವ ಪದಾರ್ಥಗಳ ಕುರಿತು ಮಕರ ಸಂಕ್ರಾಂತಿ ಫಲ ಹೇಳುವುದುಂಟು.

ಮಕರ ಸಂಕ್ರಾಂತಿಯ ಮೊದಲ ದಿನ 'ಭೋಗಿ'ಯಿಂದ ಆರಂಭವಾಗುತ್ತದೆ. ಅಂದು ಎಳ್ಳೆಣ್ಣೆ ಅಭ್ಯಂಜನ ಮಾಡಿ ದೇವರಿಗೆ ಹುಗ್ಗಿ ಪಾಯಸ, ಉಪ್ಪು ಹಚ್ಚಿ ಬೇಯಿಸಿದ ಹಸಿ ಅವರೆ, ಗೆಣಸು ನಿವೇದಿಸಿ ಭುಂಜಿಸುತ್ತಾರೆ. ಸುಮಂಗಲಿಯರು ಮರದ ಬಾಗಿಣ ಕೊಡುತ್ತಾರೆ. ಹಬ್ಬದ ಸಮಯದಲ್ಲಿ ಎಳೆಯ ಮಕ್ಕಳನ್ನು ಹಸೆಯ ಮೇಲೆ ಕೂರಿಸಿ ಎಳ್ಳು, ಎಲಚಿ, ಕಬ್ಬು ಕಾಸುಗಳನ್ನು ತಲೆಯ ಮೇಲಿಂದ ಕರಿ ಎರೆಯುತ್ತಾರೆ. ಮನೆ, ಮನೆಗೆ ಎಳ್ಳು ಬೀರಿಸುತ್ತಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಒಂದು ಚಿಕ್ಕ ಮತ್ತು ದೊಡ್ಡ ಮಣ್ಣಿನ ಗೋಪುರಾಕೃತಿಯನ್ನು ದೀಪದ ಗೂಡಿ ಸಹಿತವಾಗಿ ರೂಪಿಸುತ್ತಾರೆ. ಅವನ್ನು ಸಂಕ್ರಾಂತಮ್ಮ ಎಂದು ಈ ದಿನ ಪೂಜಿಸುತ್ತಾರೆ. ದನಕರುಗಳನ್ನು ಅಲಂಕರಿಸಿ ದೇಗುಲ ಪ್ರದಕ್ಷಿಣೆ ಮಾಡಿಸುತ್ತಾರೆ. ಸಂಕ್ರಾಂತಮ್ಮನ ಮುಂದೆ (ಒಣತರಗು ಅಥವಾ) ಒಣ ಹುಲ್ಲನ್ನು ಮೂರು ಕಡೆ ಹರಡಿ ಬೆಂಕಿ ಹತ್ತಿಸುತ್ತಾರೆ. ದನಕರುಗಳನ್ನು ಈ ಕಿಚ್ಚು ಹಾಯಿಸಿ ಮನೆಗೆ ಹೊಡೆದುಕೊಂಡು ಹೋಗಿ ಬಾಗಿಲಿಗೆ ಅಡ್ಡಲಾಗಿಟ್ಟ ಒನಕೆಯ ಮೇಲೆ ದಾಟಿಸುತ್ತಾರೆ. ಒನಕೆ, ಸೂರ್ಯ ಮತ್ತು ಶಿವರಿಗೆ ಏಕಾನ್ವಯ ಸಂಕೇತ. ಹೀಗಾಗಿ 'ಶಕ್ತಿ' ಸಂಕೇತ ಸಂಕ್ರಾಂತಮ್ಮ, ಪುರುಷ ಸಂಕೇತ ಶಿವ-ಸೂರ್ಯರಲ್ಲಿ, ಪುರುಷ-ಪ್ರಕೃತಿಗಳ ಸಹಗಾಮಿತನದ ಸಾಂಖ್ಯತತ್ತ್ವದ ಜನಪದ ರೂಪ ಈ ಆಚರಣೆಯಲ್ಲಿರುವಂತಿದೆ. (ಮಾತೃ ಹಾಗೂ ಪಿತೃ ಪ್ರಧಾನ ವ್ಯವಸ್ಥೆಯ ಸಮನ್ವಯ ಸಂಕೇತ ಇಲ್ಲಿರುವಂತಿದೆ.)

ಇನ್ನು ಕ್ರಿ.ಶ. ೧೧೬೮ರ ಕೋಡಿಮಠ ಶಾಸನದ ಫಲಶ್ರುತಿ, ೧೫೭೯ರ ಹೊಯ್ಸಳ ಬಲ್ಲಾಳನ, ೧೪೦೭ರ ವಿಜಯನಗರದ ಇಮ್ಮಡಿ ಹರಿಹರನ, ೧೭೧೫ರ ಆವತಿ ನಾಡಪ್ರಭು ದೊಡ್ಡ ಭೈರೇಗೌಡನ ಶಿಲಾ ಶಾಸನಗಳು ಮಕರ ಸಂಕ್ರಮಣ ಕಾಲದ ದಾನದ ಮಹತ್ವವನ್ನು ತಿಳಿಸುತ್ತವೆ. 'ಸಂಕ್ರಾತಿ ಧವಳ' ಎಂಬ ಬಿರುದೇ ಕ್ರಿ.ಶ. ೧೧೨೫ರ (ಹಾನುಗಲ್ಲು) ಕದಂಬ ಜಯಕೇಶಿಗಿತ್ತು.

ಕೊಡಗಿನ ಮಕರ ಸಂಕ್ರಾತಿ ಸಂದರ್ಭದ ಗೊದ್ದ ಕುಮಾರಲಿಂಗೇಶ್ವರ ಜಾತ್ರೆ, ಅವರದಾಳುವಿನ ಹುಲು ಕೋಡಯ್ಯನ ಜಾತ್ರೆಯಲ್ಲಿ ಹೆಗ್ಗಡಹಳ್ಳಿ ಮಠದ ಗುರುಗಳು, ದಲಿತವರ್ಗದ ಕೊಟವಳ ಕಣಿಯರ ಸಹಗಾಮಿಯಾಗಿ ಸಾಗಿ ಸಂಕ್ರಮಣ ಜಾತ್ರೆಯನ್ನು ಆಶೀರ್ವದಿಸುತ್ತಾರೆ.

ಬೆಂಗಳೂರಿನ ಗವಿಗಂಗಾಧರೇಶ್ವರನ ಗುಡಿ ದಕ್ಷಿಣಾಭಿಮುಖವಾಗಿದೆ. ಮಕರ ಸಂಕ್ರಾಂತಿಯಂದು ಅದರ ಗರ್ಭಗುಡಿಯ ಶಿವಲಿಂಗದ ಮೇಲೆ ಸೂರ್ಯನ ಕಿರಣಗಳು ಸಂಜೆ ೫ ಗಂಟೆಯ ಸುಮಾರಿಗೆ ಬಸವನ ಕೊಂಬುಗಳ ನಡುವೆ ತೂರಿ ಸಲ್ಲಿಸುವ ಕಿರಣಾಭಿಷೇಕ, ಶಿವದರ್ಶನಕ್ಕೆ ಸೂರ್ಯ ಬರುವ ಸುಂದರ ಸಂಕೇತ. ಗುಡಿಯಲ್ಲಿ ವೈಜ್ಞಾನಿಕ ವ್ಯವಸ್ಥೆಯ ಚಾತುರ್ಯ ಚೇತೋಹಾರಿ. ನೋಟಕ್ಕೆ ಶುಭಕರ.

ಹೀಗೆಯೇ ಇನ್ನೊಂದು ಬಗೆಯಲ್ಲಿ ಕೇರಳದ ಶಬರಿಮಲೆಯಲ್ಲಿ ಮಕರ ಸಂಕ್ರಾಂತಿಯಂದು 'ಮಕ್ಕಳ ವಿಳಕ್ಕು' ದರ್ಶನ ಭಕ್ತರಿಗೆ ಒದಗುತ್ತದೆ. ಅಸ್ಸಾಮಿನಲ್ಲಿ ಮಕರ ಸಂಕ್ರಾಂತಿಯಂದು ನಡೆಯುವುದು ಬಿಹು ಹಬ್ಬದಾಚರಣೆ.

ಮಹಾರಾಷ್ಟ್ರದಲ್ಲಿ ಅಖಂಡ ಸೌಭಾಗ್ಯ ಪ್ರಾಪ್ತಿಗಾಗಿ ಕನ್ಯೆಯರು ಎಳ್ಳಿನ ವ್ರತವನ್ನು, ಹೆಂಗಳೆಯರು ಮಣ್ಣಿನ 'ಸುಘಟ'ದ (ಗಡಿಗೆ) ಪೂಜೆ ಮಾಡುತ್ತಾರೆ. ಆಂಧ್ರನಾಡಿನಲ್ಲಿ ೩-೪ ದಿನಗಳ ದೊಡ್ಡ ಹಬ್ಬವಿದಾಗಿದೆ. ಅಲ್ಲಿ ಹಬ್ಬದ ಮೊದಲ ದಿನ 'ಭೋಗಿ'ಯಲ್ಲಿ ಒಣಹುಲ್ಲು ಬೆಂಕಿ ಹೊತ್ತಿಸಿ ಸುಗ್ಗಿ ದೇವರನ್ನು ಸ್ತುತಿಸಿ ಸುತ್ತ ಕುಣಿಯುತ್ತಾರೆ. ಎರಡನೇ ದಿನವೇ ಸಂಕ್ರಾಂತಿ. ಮೂರನೆ ದಿನ ಔತಣದ ಹಬ್ಬ, 'ಕನಮು' ನಾಲ್ಕನೇ ದಿನ ಗೋಪೂಜೆ, ಮೆರವಣಿಗೆ 'ಮಕುನುಮು' ಆಚರಿಸುತ್ತಾರೆ. ತಮಿಳುನಾಡಿನಲ್ಲಿ 'ಪೊಂಗಲ್' ಎಂಬ ಹೆಸರಿನಲ್ಲಿ ತಮಿಳರ 'ತೈ' ಮಾಸದ ಮೊದಲ ದಿನದ ಹಬ್ಬವಾಗಿ ಆಚರಿಸುತ್ತಾರೆ. ಮರುದಿನ ಪಸು ಹೋರಿ ಅಲಂಕರಿಸಿ 'ಮೊಟ್ಟು ಪೊಂಗಲ್' ಆಚರಿಸುತ್ತಾರೆ. ಸೂರ್ಯ ಪೂಜೆಯೆ ಮುಖ್ಯ. ಇದು ಮೂರು ದಿನಗಳ ಕಾಲ ನಡೆಯುತ್ತದೆ.

ಒಟ್ಟಾರೆ ಸಂಕ್ರಾಂತಿ, ನಮ್ಮ ಸಂಸ್ಕೃತಿ ಕಂಡುಕೊಂಡ ಬದುಕಿನ ಹಬ್ಬ; ವಿರಸ ಕಳೆಯುವ ಸಾಮರಸ್ಯದ ಹಬ್ಬ.

## ಶ್ರೀಮಠದಲ್ಲಿ ಪುಸ್ತಕ ಮಾರಾಟ ಮಳಿಗೆ

ಶ್ರೀ ಸಿದ್ಧಗಂಗಾ ಮಠದಲ್ಲಿ ಪುಸ್ತಕ ಮಾರಾಟ ಮಳಿಗೆಯನ್ನು ಪ್ರಾರಂಭಿಸಲಾಗಿದ್ದು, ಶ್ರೀಮಠದ ಪ್ರಕಟಣೆಗಳು ಹಾಗೂ ಮೌಲಿಕ ಧಾರ್ಮಿಕ ಗ್ರಂಥಗಳು ದೊರೆಯುತ್ತವೆ. ಆಸಕ್ತರು ಇದರ ಉಪಯೋಗವನ್ನು ಪಡೆದುಕೊಳ್ಳಲು ಕೋರಲಾಗಿದೆ.





# ಯೋಗವನ್ನು ಗೆದ್ದ ಮಹಾಯೋಗಿ ಶ್ರೀ ಅಟವಿಸ್ವಾಮಿಗಳು

— ಚಂದ್ರಶೇಖರ ನಾರಣಾಪುರ
ಚಿಕ್ಕಮಗಳೂರು

ಶ್ರೀ ಅಟವಿ ಸ್ವಾಮಿಗಳು ಎಲ್ಲಿಯವರು? ಎಲ್ಲಿಂದ ಆಗಮಿಸಿದರು? ಇವರ ಕಾಲಮಾನ ಯಾವುದು? ಎಂದು ಎದುರಾಗುವ ಹಲವು ಪ್ರಶ್ನೆಗಳನ್ನು ನಮ್ಮ ಮುಂದೆ ಇಟ್ಟುಕೊಂಡು ಆಟವಿ ಸ್ವಾಮಿಗಳ ಬಗ್ಗೆ ಜನಪದ ಮತ್ತು ಐತಿಹಾಸಿಕ ಕಥೆಗಳ ಆಧಾರದ ಮೇಲೆ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಅಡವೀಶ, ಅಡವಿ ಸಿದ್ಧೇಶ್ವರ, ಅಟವೀಶ್ವರ ಎಂಬ ಹೆಸರುಗಳಿಂದ ಕರೆಯಲಾಗುತ್ತದೆ.



### *ಜನಪದ ಹಿನ್ನೆಲೆ*

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ಶಿವಶರಣರ ಜತೆಯಲ್ಲಿದ್ದ ಶ್ರೀ ರೇಚಪ್ಪ ಎಂಬುವವರು ಶ್ರೀ ಚೆನ್ನಬಸವಣ್ಣನವರ ಜೊತೆಗೂಡಿ ಉಳವಿಗೆ ಬಂದು ನೆಲೆಸಿರುತ್ತಾರೆ. ಶ್ರೀ ಚನ್ನಬಸವಣ್ಣನವರ ಅಪ್ಪಣೆಯಂತೆ ಶ್ರೀ ರೇಚಪ್ಪನವರು ಉಳವಿಯಲ್ಲಿಯೇ ದೀರ್ಘ ಅನುಷ್ಠಾನ ವನ್ನು ಆಚರಿಸಿ ಯೋಗ ಸಿದ್ಧಿಯನ್ನು ಸಂಪಾದಿಸಿಕೊಂಡಿದ್ದರು. ಧರ್ಮ ಮತ್ತು ಯೋಗದಲ್ಲಿ ಅಗಾಧ ವಾದದ್ದನ್ನು ಸಾಧಿಸಬೇಕೆಂಬ ಉತ್ಕಟ ಆಸೆಯಿಂದ ಉಳವಿ ಯನ್ನು ತೊರೆದು, ಹಿಮಾಲಯದ ಸಾಧಕರ ಜತೆ ಸೇರಲು ಪ್ರಯಾಣ ಬೆಳೆಸಿದರೆಂಬುದು ಜನಪದ ಕಥೆಯಿಂದ ತಿಳಿದುಬರು ತ್ತದೆ. ಶ್ರೀ ಅಟವಿಸ್ವಾಮಿಗಳು ಹಿಮಾಲಯಕ್ಕೆ ಹೋಗಿ ಸಾಧನೆಯ ಸಿದ್ಧಿಯನ್ನು ಸಂಪಾದಿಸಿಕೊಂಡು ಹಿಂದಿರುಗಿದರು. ಗುರುಗಳು ಹಿಂದಿರುವಾಗ ಕುರುಕ್ಷೇತ್ರ, ಕಾಶಿ, ಶ್ರೀಶೈಲ, ಕಲ್ಯಾಣ, ಕಂಚಿ, ಕಾಳಹಸ್ತಿ, ಕುಂಭಕೋಣ, ಭುವನೇಶ್ವರ, ಪುಣ್ಯ ಕಾವೇರಿ, ಮಧುರೆ, ಕೊಡಗು, ಮುಡುಕುತೊರೆ ಮುಂತಾದ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿದರು ಎಂದು ಶ್ರೀಮದ್ ಅಟವೀಶ್ವರರ ಚರಿತ್ರೆಯಲ್ಲಿ ವರ್ಣಿತವಾಗಿದೆ.

ಈ ರೀತಿ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ದೀರ್ಘ ತಪೋನುಷ್ಠಾನಗೊಂಡು, ಬೆಳಗಾಂ ಜಿಲ್ಲೆ ಗೋಕಾಕು ತಾಲ್ಲೂಕಿನ ಅಂಕಲಗಿಗೆ ಬರುತ್ತಾರೆ. ಶ್ರೀ ರೇಚಪ್ಪಸ್ವಾಮಿಗಳು ನಿರ್ಜನ ಪ್ರದೇಶದ ಅಡವಿಯಲ್ಲಿ ತಪೋನುಷ್ಠಾನ ಕೈಗೊಳ್ಳುತ್ತಿದ್ದ ಕಾರಣ ಅವರಿಗೆ ಅಡವಿ ಸ್ವಾಮಿಗಳು ಎಂದು ಭಕ್ತರು ಕರೆಯತೊಡಗಿದ್ದರಿಂದ ಈ ಹೆಸರೇ ರೇಚಪ್ಪ ಗುರುಗಳಿಗೆ ಖಾಯಂ ಆಗಿ ಉಳಿದುಕೊಂಡಿತು ಎಂದು ಅಂಕಲಗಿ ಅಡವಿಮಠದ ಪ್ರಕಟಿತ ಕೃತಿ 'ಶ್ರೀ ಅಡವೀಶ್ವರ ಚರಿತ್ರೆ'ಯಲ್ಲಿ ಉಲ್ಲೇಖಗೊಂಡಿದೆ. ಶ್ರೀ ಅಡವಿ ಸ್ವಾಮಿಗಳು ಹಿಮಾಲಯದಿಂದ ಲೋಕ ಸಂಚಾರ ಮಾಡುತ್ತಾ ಅಂಕಲಗಿಗೆ ಆಗಮಿಸಿ ಇಲ್ಲಿ ಮಠವನ್ನು ಸ್ಥಾಪನೆ ಮಾಡಿ, ವೀರಶೈವ ಧರ್ಮದ ಪ್ರಚಾರ ಕೇಂದ್ರವನ್ನಾಗಿ ಮಾಡಿಕೊಂಡು ಯೋಗ ಸಾಧನೆ ಯಲ್ಲಿ ತೊಡಗಿರುತ್ತಾರೆ. ಇಲ್ಲಿ ಅನೇಕ ಪವಾಡಗಳನ್ನು ಮಾಡಿ ಭಕ್ತರ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡಿ, ಮಠವನ್ನು ಬೆಳೆಸಿ ಲೋಕ ಸಂಚಾರಕ್ಕೆಂದು ದಕ್ಷಿಣದ ಕಡೆ ಹೊರಡುತ್ತಾರೆ.

### *ಐತಿಹಾಸಿಕ ಹಿನ್ನೆಲೆ*

ಶ್ರೀ ಅಟವಿ ಸ್ವಾಮಿಗಳು ಗುಬ್ಬಿಗೆ ಆಗಮಿಸಿ ಗೋಸಲ ಶ್ರೀ ಚನ್ನಬಸವೇಶ್ವರ ದೇವಸ್ಥಾನದಲ್ಲಿ ಕೆಲವು ದಿನಗಳು ನೆಲೆಸಿ, ಗುಬ್ಬಿಯ ತೊರೆಯ ದಡದಲ್ಲಿ ತೊರೆ ಮಠವನ್ನು ಸ್ಥಾಪಿಸಿ

ವೀರಶೈವ ಧರ್ಮದ ಬೆಳವಣಿಗೆಗೆ ಸಹಾಯಕರಾಗಿದ್ದಾರೆ. ಶ್ರೀ ಅಟವಿ ಸ್ವಾಮಿಗಳು ಒಂದೆಡೆ ನೆಲೆಸದೆ ಸದಾ ಸಂಚಾರ ಮೂರ್ತಿಯಾಗಿ ಗುಬ್ಬಿಯಿಂದ ಸಿದ್ಧಗಂಗಾ ಕ್ಷೇತ್ರಕ್ಕೆ (೧೮೭೫) ಬಂದ ಸಂದರ್ಭದಲ್ಲಿ ಶ್ರೀ ಸಿದ್ಧಲಿಂಗಸ್ವಾಮಿಗಳು ಇಲ್ಲಿಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಶ್ರೀ ಅಟವಿ ಸ್ವಾಮಿಗಳು ಸಿದ್ಧಗಂಗಾ ಮಠದಲ್ಲಿ ದಾಸೋಹಕ್ಕೆ ಹೆಚ್ಚು ಒತ್ತುಕೊಟ್ಟು ದುಡಿಯ ತೊಡಗಿದರು. ಮುಪ್ಪಿನಲ್ಲಿದ್ದ ಶ್ರೀ ಸಿದ್ಧಲಿಂಗಸ್ವಾಮಿಗಳು ಶ್ರೀ ಅಟವಿ ಸ್ವಾಮಿಗಳ ಕ್ರಿಯಾಶೀಲ ಗುಣಗಳನ್ನು ಗಮನಿಸಿ, ಮಠದ ಪೂರ್ಣ ಅಧಿಕಾರವನ್ನು ಶ್ರೀ ಅಟವಿಸ್ವಾಮಿಗಳಿಗೆ ಒಪ್ಪಿಸಿದರು.

ಶ್ರೀ ಅಟವಿ ಸ್ವಾಮಿಗಳು ಮಠದ ಸಮಸ್ತ ಆಡಳಿತವನ್ನು ನೋಡಿಕೊಳ್ಳುತ್ತಾ ಗವಿಯೊಂದರದಲ್ಲಿ ದೀರ್ಘ ಅನುಷ್ಠಾನ ಗೊಂಡು ಈ ತಪೋಭೂಮಿಯಲ್ಲಿ ಧರ್ಮ ಮತ್ತು ದಾಸೋಹ ಬೆಳೆಯಲು ಪ್ರೇರಕ ಶಕ್ತಿಯಾದರು. ದಾಸೋಹಕ್ಕೆ "ಇಂದು ಹಾಕಿದ ಬೆಂಕಿಮುಂದೆ ಎಂದೂ ಆರದಿರಲಿ, ಇಂದು ಪ್ರಾರಂಭಗೊಂಡ ಅನ್ನ ದಾಸೋಹ ಎಂದಿಗೂ ನಿಲ್ಲದಿರಲಿ" ಎಂದು ಹಾರೈಸಿ ಅನ್ನ ದಾಸೋಹವನ್ನು ಪ್ರಾರಂಭ ಮಾಡಿದರು. ಅಂದು ಪ್ರಾರಂಭಗೊಂಡ ಅನ್ನ ದಾಸೋಹ ಅಂದಿನಿಂದ ಹತ್ತು ಪಟ್ಟು, ನೂರು ಪಟ್ಟು ಬೆಳೆದು ಈಗ ಸಾವಿರ ಪಟ್ಟು ಬೆಳೆದು ಮಹಾ ದಾಸೋಹ ಕ್ಷೇತ್ರವಾಗಿ ವಿಶ್ವಮಾನ್ಯತೆಯನ್ನು ಪಡೆದುಕೊಂಡಿದೆ. ಇಂತಹ ಒಂದು ಸಾಧನೆಯ ಹರಿಕಾರರಾದ ಶ್ರೀ ಅಟವಿ ಸ್ವಾಮಿಗಳು ಸಿದ್ಧಗಂಗಾ ಕ್ಷೇತ್ರಕ್ಕೆ ಶ್ರೀ ಉದ್ದಾನ ಶಿವಯೋಗಿಗಳನ್ನು ನೆಲೆಗೊಳಿಸಿ ಭಕ್ತರ ಅಪೇಕ್ಷೆಯ ಮೇರೆಗೆ ಗುಬ್ಬಿಗೆ ಹೋಗುತ್ತಾರೆ.

ಶ್ರೀ ಅಟವಿಸ್ವಾಮಿಗಳು ಗುಬ್ಬಿಯನ್ನು ತಮ್ಮ ಧರ್ಮ ಪ್ರಚಾರದ ಕೇಂದ್ರವನ್ನಾಗಿಸಿಕೊಂಡು ಕುಣಿಗಲ್ಲು, ಚಿಕ್ಕತೊಟ್ಟಿಲುಕೆರೆ ಮುಂತಾದ ಕಡೆಗಳಲ್ಲಿ ಕೆಲವು ದಿನ ನೆಲೆನಿಂತು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದರು. ಇದರಲ್ಲಿ ಚಿಕ್ಕತೊಟ್ಟಿಲುಕೆರೆ ಶ್ರೀ ಅಟವಿಸ್ವಾಮಿಗಳ ತಪೋಕ್ಷೇತ್ರಗಳಲ್ಲಿ ಒಂದಾಗಿ ಬೆಳೆಯಿತು. ಶ್ರೀ ಅಟವಿಸ್ವಾಮಿಗಳು ಈ ಕ್ಷೇತ್ರಕ್ಕೆ ಆಗಿಂದಾಗ್ಗೆ ಭೇಟಿಕೊಟ್ಟು, ತಪೋನುಷ್ಠಾನ ಕೈಗೊಂಡು ಯೋಗ ಸಿದ್ಧಿಯನ್ನು ಸಂಪಾದಿಸಿಕೊಂಡು ಬರುತ್ತಿದ್ದರು.

*ಶ್ರೀ ಅಟವಿಸ್ವಾಮಿಗಳ ತಪೋಕ್ಷೇತ್ರ*

ತುಮಕೂರು ತಾಲ್ಲೂಕಿನ ಚಿಕ್ಕತೊಟ್ಟಲು ಕೆರೆಯು ತಾಲ್ಲೂಕು ಕೇಂದ್ರದ ಉತ್ತರಕ್ಕೆ ಹದಿನೆಂಟು ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಈಶಾನ್ಯ ಭಾಗಕ್ಕೆ ಒಂದೂವರೆ ಕಿ.ಮೀ. ದೂರದಲ್ಲಿ ಶ್ರೀ ಅಟವಿ ಸ್ವಾಮಿಗಳು ತಪೋನುಷ್ಠಾನ ಕೈಗೊಳ್ಳುತ್ತಿದ್ದ ಗವಿಕ್ಷೇತ್ರವಿದೆ. ಶ್ರೀ ಅಟವಿ ಸ್ವಾಮಿಗಳು ಈ ಕ್ಷೇತ್ರಕ್ಕೆ ಬರುವ ಮುನ್ನ ಶ್ರೀ ಓಂಕಾರ ಸ್ವಾಮಿಗಳು ಈ ಸ್ಥಳದಲ್ಲಿ ಅನುಷ್ಠಾನವನ್ನು ಕೈಗೊಂಡು ಮಠವನ್ನು ಸ್ಥಾಪನೆ ಮಾಡಿದ್ದರು. ಶ್ರೀ ಓಂಕಾರೇಶ್ವರರ ನಂತರ ಶ್ರೀ ಜಡೆಸ್ವಾಮಿಗಳು ಅಧಿಕಾರ ವಹಿಸಿ ಈ ಧಾರ್ಮಿಕ ಕಾರ್ಯಗಳು ನಿಲ್ಲದಂತೆ ನೋಡಿ ಕೊಂಡು, ಜನರನ್ನು ಜಾಗೃತರನ್ನಾಗಿ ಮಾಡಿ ಈ ಕ್ಷೇತ್ರದಲ್ಲಿಯೇ ಲಿಂಗೈಕ್ಯರಾದರು. ಇಂತಹ ಯೋಗ ಭೂಮಿಯಲ್ಲಿ ಶ್ರೀ ಅಟವಿ ಸ್ವಾಮಿ ಗಳು ನೈಸರ್ಗಿಕನಾದ ಗವಿಯಲ್ಲಿ ತಪೋನು ಷ್ಠಾನ ಕೈಗೊಂಡು ಈ ಧರ್ಮ ಕ್ಷೇತ್ರವನ್ನು ಬೆಳೆಸಿದರು. ಅಲ್ಲದೆ ತಮ್ಮ ಕರಕಮಲಸಂಜಾತರಾದ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಗಳಿಗೆ ಅನುಗ್ರಹವನ್ನು ನೀಡಿ ಮಠವನ್ನು ಪುನರ್ ಸ್ಥಾಪಿಸಿದ್ದರು.

*ಜೀವಂತ ಸಮಾಧಿಗೆ ಸಿದ್ಧತೆ*

ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಧರ್ಮ ಮತ್ತು ದಾಸೋಹದ ಕ್ಷೇತ್ರವನ್ನಾಗಿ ರೂಪಿಸಿದ ಶ್ರೀ ಅಟವಿ ಸ್ವಾಮಿಗಳು ಗುಬ್ಬಿಯ ತೋರೆಮಠದಲ್ಲಿ ದಾಸೋಹ ಕ್ರಿಯೆಗಳು ಶಾಶ್ವತವಾಗಿ ನಡೆಯಬೇಕೆಂಬ ಹಂಬಲದಿಂದ ನಿತ್ಯ ದಾಸೋಹಕ್ಕೆ ಚಾಲನೆಯನ್ನು ನೀಡಿದರು. ತಮ್ಮ ಕೊನೆಯ ದಿನಗಳ ಕಾರ್ಯಕ್ಷೇತ್ರವಾಗಿ ರೂಪುಗೊಂಡ ಗುಬ್ಬಿ ಕ್ಷೇತ್ರದಲ್ಲಿ ಜೀವಂತ ಸಮಾಧಿಯಾಗಬೇಕೆಂಬ ಹಂಬಲದಿಂದ ತೋರೆಮಠದ ಮುಂಭಾಗದ ಆವರಣದಲ್ಲಿ ತಮಗಾಗಿ ಸಮಾಧಿಯನ್ನು ನಿರ್ಮಿಸಿಕೊಂಡರು. ತಮ್ಮ ಕರಕಮಲಸಂಜಾರಾಗಿದ್ದ ಶ್ರೀ ಚಿಕ್ಕಅಟವಿಸ್ವಾಮಿಗಳು (ಶ್ರೀ ಸಿದ್ಧವೀರಸ್ವಾಮಿಗಳು) ಮತ್ತು ಉದ್ದಾನ ಸ್ವಾಮಿಗಳನ್ನು ಕರೆಸಿ ತಾವು ಜೀವಂತ ಸಮಾಧಿಯಾದ ಮೇಲೆ ಮಾಡಬೇಕಾದ ವಿಧಿವಿಧಾನಗಳ ಬಗ್ಗೆ ತಿಳಿಸಿದರು. ಜೀವಂತ ಸಮಾಧಿಯನ್ನು ನಿರ್ಮಿಸಿಕೊಂಡ ಶ್ರೀ ಅಟವಿ ಸ್ವಾಮಿಗಳು ಯಾರೊಂದಿಗೂ ಹೆಚ್ಚು ಬೆರೆಯದೆ ದೀರ್ಘ ತಪೋನುಷ್ಠಾನಕ್ಕೆ ಕುಳಿತರು. ಇಂತಹ ದಿನಗಳಲ್ಲಿ ಶ್ರೀ ಅಟವಿ ಸ್ವಾಮಿಗಳನ್ನು ತಮ್ಮ ಮನೆಗೆ ಆಮಂತ್ರಿಸಲೆಂದು ಚಿಕ್ಕತೊಟ್ಟಲುಕೆರೆ ಪ್ರಾಂತ್ಯದ ಭಕ್ತನೊಬ್ಬ ಆಗಮಿಸುತ್ತಾನೆ.





ಭಕ್ತನ ಅಪೇಕ್ಷೆಯನ್ನು ನಿರಾಕರಿಸಲಾಗದ ಶ್ರೀ ಅಟವಿಸ್ವಾಮಿಗಳು ಕಾರ್ತೀಕ ಮಾಸದೊಳಗೆ ನಾವು ಈ ಮಠದಲ್ಲಿಯೇ ಇರಬೇಕು. ಅಷ್ಟರೊಳಗಾಗಿ ನಮ್ಮನ್ನು ಮಠಕ್ಕೆ ತಲುಪಿಸಬೇಕು ಎಂದು ಅಪ್ಪಣೆಯನ್ನು ಕೊಟ್ಟು ಭಕ್ತನ ಮನೆಗೆ ಪೂಜೆಗೆಂದು ಹೊರಡುತ್ತಾರೆ.

**ಬದಲಾದ ವಿಧಿಯ ಲೀಲೆ**

ಭಕ್ತನ ಮನೆಯಲ್ಲಿ ಪೂಜೆಯನ್ನು ಮುಗಿಸಿಕೊಂಡು ಗುಬ್ಬಿಗೆ ಹಿಂದಿರುಗಲು ಗಾಡಿಯಲ್ಲಿ ಪ್ರಯಾಣ ಬೆಳೆಸಿದರು. ಪ್ರಯಾಣ ಮಧ್ಯದಲ್ಲಿ ಗಾಡಿ ಹೊಡೆಯುತ್ತಿದ್ದ ಸೇವಕನನ್ನು ಕುರಿತು "ಗುರುಕಾರುಣ್ಯ ಕರೆಯುತ್ತಿದೆ. ನಾನು ಬೇಗ ಗುಬ್ಬಿಯನ್ನು ತಲುಪಬೇಕಾಗಿದೆ ಎತ್ತುಗಳನ್ನು ಚುರುಕುಗೊಳಿಸು" ಎಂದು ಶ್ರೀ ಅಟವಿಸ್ವಾಮಿಗಳು ಹೇಳಿದರು. ಪುನಃ ಗಾಡಿಯನ್ನು ಹೊಡೆಯುತ್ತಿದ್ದ ಸೇವಕನನ್ನು ಕುರಿತು "ನಾವು ಗಾಡಿಯಲ್ಲಿಯೇ ಧ್ಯಾನಾಸಕ್ತರಾಗಿ ಕುಳಿತಿರುತ್ತೇವೆ. ಗುಬ್ಬಿ ಬಂದ ಮೇಲೆ ಎಚ್ಚರಿಸು, ದಾರಿಯ ಮಧ್ಯದಲ್ಲಿ ಎಲ್ಲಿಯಾದರೂ ಎಚ್ಚರಿಸೀಯ ಜೋಕೆ" ಎಂದು ಎಚ್ಚರಿಕೆ ನೀಡಿ ಗಾಡಿಯಲ್ಲಿ ತಪೋಮಗ್ನರಾದರು. ಗಾಡಿ ಹೊಡೆಯುತ್ತಿದ್ದ ಸೇವಕ ಚಿಕ್ಕತೊಟ್ಟಿಲುಕೆರೆಯವನಾಗಿದ್ದು ತನ್ನ ಊರಿನಲ್ಲಿಯೇ ಗುರುಗಳ ಜೀವಂತ ಸಮಾಧಿಯಾದರೆ ನಾನು ಹುಟ್ಟಿದ ಊರಿಗೆ ಕೀರ್ತಿ ಬರುತ್ತದೆ ಎಂಬ ಅಂಧ ಅಭಿಮಾನದಿಂದ ಚಿಕ್ಕತೊಟ್ಟಿಲುಕೆರೆಯ ದಾರಿಯಲ್ಲಿ ಬರುತ್ತಿದ್ದ ಗಾಡಿಯನ್ನು ಶ್ರೀ ಅಟವಿಸ್ವಾಮಿಗಳು ತಪೋನುಷ್ಠಾನ ಮಾಡುತ್ತಿದ್ದ ಮಠದ ಬಳಿ ತಂದು "ಗುರುಗಳೇ, ನಾವು ಮಠಕ್ಕೆ ಬಂದು ಸೇರಿದ್ದೇವೆ ಕಣ್ಣುಬಿಡಿ" ಎಂದು ಎಚ್ಚರಿಸುತ್ತಾನೆ. ಶ್ರೀ ಅಟವಿಸ್ವಾಮಿಗಳು ಕಣ್ಣುಬಿಟ್ಟು ನೋಡುತ್ತಾರೆ. ಗುಬ್ಬಿಯ ತೋರೆಮಠದ ಬದಲಿಗೆ ಚಿಕ್ಕತೊಟ್ಟಲಕೆರೆಯ ಮಠ ಕಣ್ಣು ಎದುರಿಗೆ ಇದೆ. "ಇದೇನು ಗುಬ್ಬಿಯ ತೊರೆಮಠದಲ್ಲಿ ಎಚ್ಚರಿಸುವುದರ ಬದಲು ಇಲ್ಲಿ ಎಚ್ಚರಿಸಿರುವೆ, ನಮ್ಮ ಕಾರ್ಯಕ್ಷೇತ್ರವಾದ ಗುಬ್ಬಿಯಲ್ಲಿ ನಾವು ಜೀವಂತ ಸಮಾಧಿಯಾಗಬೇಕು ಎಂಬ ಹಂಬಲ ಹೊಂದಿದ್ದ ನಮ್ಮ ಆಸೆಗೆ ಭಂಗವುಂಟು ಮಾಡಿದೆಯಲ್ಲೋ ಪಾಪಿ ಎಂದು ನಿಂದಿಸಿ, ಗುರುದ್ರೋಹವನ್ನು ಮಾಡಿದ ನಿನ್ನ ವಂಶ ನಾಶವಾಗಲಿ" ಎಂದು ಶಾಪಕೊಟ್ಟು ಗಾಡಿಯಿಂದ ಇಳಿದ ಶ್ರೀ ಅಟವಿ ಸ್ವಾಮಿಗಳು ನೇರವಾಗಿ ತಾವು ತಪೋನುಷ್ಠಾನವನ್ನು ಕೈಗೊಳ್ಳುತ್ತಿದ್ದ ಗವಿಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡು ನಿರ್ವಿಕಲ್ಪ ಸಮಾಧಿಯನ್ನು ಹೊಂದುತ್ತಾರೆ.

ನಾಡಿನ ಬೆಳಕಾಗಿದ್ದ ಶ್ರೀ ಅಟವಿಸ್ವಾಮಿಗಳು ೧೯೦೧ರಲ್ಲಿ (ಕಾರ್ತೀಕಮಾಸ ಶುಕ್ಲಪಕ್ಷದ ದಶಮಿ) ನಿರ್ಮಿಕಲ್ಪ ಸಮಾಧಿಯಾಗಿದ್ದರಿಂದ ಚಿಕ್ಕತೊಟ್ಟಲುಕೆರೆಯು ಧಾರ್ಮಿಕ ಕ್ಷೇತ್ರದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತು.

❋

**ಲಿಂ. ಶ್ರೀ ಅಟವಿಸ್ವಾಮಿಗಳು, ಲಿಂ. ಶ್ರೀ ಉದ್ದಾನ ಶಿವಯೋಗಿಗಳವರ ಪುಣ್ಯಾರಾಧನೆ ಮತ್ತು ಗ್ರಾಮಾಂತರ ಬಸವ ಜಯಂತಿ ಸಮಾರೋಪ ಸಮಾರಂಭ**

ಶ್ರೀಮಠದಲ್ಲಿ ಜನವರಿ ೧೫, ೨೦೦೩ರಂದು ಲಿಂಗೈಕ್ಯ ಶ್ರೀ ಅಟವೀಸ್ವಾಮಿಗಳು, ಶ್ರೀ ಉದ್ದಾನ ಶಿವಯೋಗಿಗಳ ಪುಣ್ಯಾರಾಧನೆ ಹಾಗೂ ಗ್ರಾಮಾಂತರ ಬಸವ ಜಯಂತಿ ವಾರ್ಷಿಕ ಸಮಾರೋಪ ಸಮಾರಂಭವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಲಿದೆ. ಈ ಭವ್ಯ ಸಮಾರಂಭದದಲ್ಲಿ ನಾಡಿನ ಅನೇಕ ಧರ್ಮಗುರುಗಳು, ಸಾಹಿತಿಗಳು, ಕಲಾವಿದರು ಮತ್ತು ಬಸವತತ್ವ ಪ್ರೇಮಿಗಳು ಭಾಗವಹಿಸಲಿದ್ದಾರೆ. ತಾವು ಈ ಸಮಾರಂಭದಲ್ಲಿ ಭಾಗವಹಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕೆಂದು ಕೋರುತ್ತೇವೆ. ಅಂದು ಬೆಳಿಗ್ಗೆ ನಂದಿಧ್ವಜ, ಕರಡಿ ಮಜಲು, ಮಂಗಳವಾದ್ಯ, ಹಾಗೂ ಮಂಗಳ ಕಳಶಗಳೊಂದಿಗೆ ಪೂಜ್ಯ ಲಿಂಗೈಕ್ಯ ಶ್ರೀ ಶ್ರೀ ಅಟವೀಸ್ವಾಮಿಗಳವರ ಮತ್ತು ಪೂಜ್ಯ ಲಿಂಗೈಕ್ಯ ಶ್ರೀ ಶ್ರೀ ಉದ್ದಾನ ಶಿವಯೋಗಿಗಳವರ ಭಾವಚಿತ್ರಗಳ ಪಲ್ಲಕ್ಕಿ ಉತ್ಸವವನ್ನು ಏರ್ಪಡಿಸಲಾಗಿದೆ.



# ಧರ್ಮದ ನಂದಾದೀಪ ಶ್ರೀ ಉದ್ದಾನ ಮಹಾಸ್ವಾಮಿಗಳು

– ಕವಿತಾಕೃಷ್ಣ
ವಿದ್ಯಾ ವಾಚಸ್ಪತಿ, ಕ್ಯಾತ್ಸಂದ್ರ

**ಲೋ**ಕದಲ್ಲಿ ಎರಡು ಬಗೆಯ ವಸ್ತುಗಳು ಕಾಣಸಿಗುತ್ತವೆ. ಒಂದು ಮಕಮಲ್ಲಿನ ಬಟ್ಟೆಯಲ್ಲಿ ಕಟ್ಟಿದ ಗಾಜಿನ ಚೂರು. ಇನ್ನೊಂದು ಚಿಂದಿಬಟ್ಟೆಯಲ್ಲಿ ಕಟ್ಟಿಟ್ಟ ಅಮೂಲ್ಯ ರತ್ನ. ಹೀಗೆಯೇ ಲೋಕದಲ್ಲಿ ಎರಡು ಬಗೆಯ ಜನರು ಕಾಣಸಿಗುತ್ತಾರೆ. ಓರ್ವರು ಅಸಾಮಾನ್ಯನ ವೇಷಹೊತ್ತ ಸಾಮಾನ್ಯರು. ಮತ್ತೋರ್ವರು ಸಾಮಾನ್ಯನ ರೂಪಹೊತ್ತ ಅಸಾಮಾನ್ಯರು. ಶ್ರೀ ಸಿದ್ಧಗಂಗಾ ಕ್ಷೇತ್ರದ ಗುರುಪರಂಪರೆಯಲ್ಲಿ ಗೋಚರಿಸುವ ಶ್ರೀ ಉದ್ದಾನ ಶಿವಯೋಗಿಗಳು ಎರಡನೆಯ ಗುಂಪಿನಲ್ಲಿ ಕಾಣಬರುವ ಮಹಾತ್ಮರು.



ಶ್ರೀ ಉದ್ದಾನ ಶಿವಯೋಗಿಗಳು ಅವತರಿಸಿದ್ದು ಲಕ್ಕೂರು ಎಂಬ ಕುಗ್ರಾಮದಲ್ಲಿ. ಬೆಳೆದದ್ದು ಶರಣ ಸಜ್ಜನಿಕೆಯ ಕುಟುಂಬದಲ್ಲಿ. ಕುರಿ-ಮೇಕೆಗಳನ್ನು ಕಾಯುತ್ತಾ ತಿರುಗಿದ್ದು ಬೆಟ್ಟ ಕಾಡು. ಪಡೆದದ್ದು ಅನೂಹ್ಯ ಜ್ಞಾನಸಂಪಾದನೆ. ತಿರಸ್ಕರಿಸಿದ್ದು ಲೋಕ ವ್ಯಾಪಾರ. ಬೇಡವಾದದ್ದು ಹುಟ್ಟೂರ ವಾಸ. ಸೇರಿದ್ದು ಪುಣ್ಯಕ್ಷೇತ್ರ, ಲಭಿಸಿದ್ದು ಗುರುಗಳ ಅನುಗ್ರಹ. ನಿತ್ಯ ಮಾಡಿದ್ದು ಯೋಗಾಭ್ಯಾಸ. ಮಡಿಮಾಡಿದ್ದು ಜನರ ಹೃನ್ಮನ. ಈ ಯತಿವರ ಕಟ್ಟಿದ್ದು ಮಹಾವಿದ್ಯಾಲಯ. ಬಿತ್ತಿದ್ದು ಅಕ್ಷರಜ್ಞಾನದೊಂದಿಗೆ ಸುಜ್ಞಾನ. ನಿತ್ಯ ನಿರಂತರ ನಡೆಸಿದ್ದು ದಾಸೋಹ. ಅನ್ಯಾಯ ಕಂಡಾಗ ಉಗ್ರ. ಒಮ್ಮೊಮ್ಮೆ ಹೂವಿನಷ್ಟು ಕೋಮಲ; ಮತ್ತೊಮ್ಮೆ ವಜ್ರದಷ್ಟು ಕಠಿಣ. ಮಾಡಿದ ಕಾಯಕ ಪರ್ವತಕ್ಕು ಮಿಗಿಲು, ಮಂತ್ರಶಕ್ತಿಯಲ್ಲಿ ಮಹಂತ. ಪವಾಡ ಮಾಡಿದವರಲ್ಲಿ ಮಹಿಮಾನ್ವಿತ. ಯೋಗಿಗಳ ಯೋಗಿ ಈ ಶ್ರೀ ಉದ್ದಾನ ಶಿವಯೋಗಿ.

ಉದ್ದಾನ ಶಿವಯೋಗಿಗಳ ತಪದ ಫಲವಾಗಿ ಸಾಮಾನ್ಯವಾಗಿದ್ದ ಶ್ರೀ ಸಿದ್ಧಗಂಗಾ ಕ್ಷೇತ್ರ ಹಿಮದಗಡಿಯಿಂದ ಕಡಲ ತಡಿಯ ತನಕ ಸವಿಸ್ತಾರವಾದ ಭಾರತದಲ್ಲಿ ಪ್ರಖ್ಯಾತಿ ಪಡೆಯಿತು. ಪುಣ್ಯಮಾತೆ ಸಿರಿ ಸಿದ್ಧಗಂಗೆ ಮತ್ತು ಪರಮಾತ್ಮ ಶ್ರೀ ಸಿದ್ಧಲಿಂಗೇಶ್ವರರು ನೆಲೆಸಿದ ಕೈಲಾಸವಾಯಿತು. ವಿದ್ಯಾಧಿದೇವತೆಯ ತವರಾಯಿತು. ಅನ್ನಪೂರ್ಣೇಶ್ವರಿಯ ಆವಾಸಸ್ಥಾನವಾಯಿತು. ಹಸಿದವರ ಒಡಲು ತುಂಬಿತು. ಮತಿಗೆ ಮಂಗಳ ಜ್ಞಾನ ನೀಡಿತು. ದೀನದಲಿತರ ಮಹಾಮನೆಯಾಯಿತು. ಭಕ್ತಾಭಿಮಾನಿಗಳಿಗೆ ಮುಕ್ತಿಯ ಮಂದಿರವಾಯಿತು. ತ್ರಿವಿಧ ದಾಸೋಹಸಿರಿಯ ಭಂಡಾರವಾಯಿತು. ನಡೆದಾಡುವ ದೇವರೆಂದು ಲೋಕವಿಖ್ಯಾತ 'ಅಭಿನವ ಬಸವಣ್ಣ'ನೆನಿಸುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳನ್ನು ಕಣ್ಣಾರೆ ಕಾಣುವ ಸದವಕಾಶ ಕಲ್ಪಿಸಿತು. ಭಕ್ತಿಯ ಪುಣ್ಯಚಿಲುಮೆ ಉಕ್ಕಿ ಹರಿಯಿತು. ಸಹಸ್ರ ಸಹಸ್ರ ವಿದ್ಯಾರ್ಥಿಗಳ ಮಹಾಮನೆಯಾಯಿತು. ಕ್ಷೇತ್ರ ಅಧ್ಯಾತ್ಮಮಯವಾಯಿತು, ತಪೋಮಯವಾಯಿತು. ಮುಕ್ತಿಕಾಂತೆಯ ಮನೆಯಾಯಿತು.

### *ಬದುಕು ಸಚಿತ್ರ, ಆದರೂ ವಿಚಿತ್ರ*

ಮಹಾತ್ಮರ ಬದುಕನ್ನು ಇದಮಿತ್ಥಂ ಎಂದು ಹೇಳಲು ಬರುವುದಿಲ್ಲ, ಕಾರಣ ಅವರ ಬದುಕು ಅಸಾಮಾನ್ಯವಾದುದು.





ವ್ಯಕ್ತಿತ್ವ ಕೇವಲ ವ್ಯಕ್ತಿತ್ವವಾಗಿರದೆ ಅವರಲ್ಲಿ ಅದ್ಭುತ ಶಕ್ತಿಯಾಗಿರುವುದು. ಉದ್ದಾನ ಶಿವಯೋಗಿಗಳ ಬದುಕು ಕೂಡ ಹೀಗೆಯೆ. ಪೂಜ್ಯರು ೧೮೬೦ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ, ನೆಲಮಂಗಲ ತಾಲ್ಲೂಕಿನ, ಸೋಂಪುರ ಹೋಬಳಿಯ ಲಕ್ಕೂರು ಗ್ರಾಮದಲ್ಲಿ ಉದಿಸಿದರು. ಅಲ್ಲಿನ ಪಟೇಲರ ಮನೆತನದ ಗಟ್ಟಿಪ್ಪ ಮತ್ತು ಮರುಳಮ್ಮ ಅವರಿಗೆ ಮಗನಾಗಿ ಜನಿಸಿದರು. ನೂರಾರು ಎಕರೆ ಭೂಮಿಯಿತ್ತು. ಮನೆತುಂಬ ದವಸ ಧಾನ್ಯ ತುಂಬಿತ್ತು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ. ಬಾಲ್ಯದಲ್ಲಿ ಅವರು ಮೇಕೆ-ಕುರಿಗಳನ್ನು ಕಾಯುವ ಕೆಲಸವನ್ನು ಒಪ್ಪಿಕೊಂಡರು. ನಿತ್ಯ ಹತ್ತಿರದ ನಿಜಗಲ್ ಬೆಟ್ಟಕ್ಕೆ ಹೋಗುತ್ತಿದ್ದರು. ಮೇಕೆಗಳನ್ನು ಮೇಯ್ಯಲು ಬಿಟ್ಟು ಏಕಾಂತವಾಗಿ ಕೂರುತ್ತಿದ್ದರು. ಅವರಿಗೆ ದೇವರಪೂಜೆ, ಧ್ಯಾನ ಎಂದರೆ ಅದೇನೋ ಆನಂದ. ಮೈಮರೆತು ಕುಳಿತುಬಿಡುತ್ತಿದ್ದರು. ಕಿರಿಯ ಮಗನೆಂದು ತಾಯಿ ತಂದೆ ಹುಟ್ಟೂರಿನ ಸಮೀಪದ ಕೂಲಿಮಠಕ್ಕೆ ಹಾಕಿದ್ದರು. ಆದರೆ ಇವರಿಗೆ ಓದು ರುಚಿಸಲಿಲ್ಲ. ಕ್ರಮೇಣ ಶಾಲೆ ಬಿಟ್ಟರು. ಸುತ್ತಣ ಇದ್ದ ಬೆಟ್ಟ, ಗವಿ, ಗುಡಿ, ಕಾಡು-ಮೇಡುಗಳಲ್ಲಿ ಅಲೆದರು. ಇವರ ವರ್ತನೆಗೆ ಅಣ್ಣ-ತಮ್ಮಂದಿರು ಜಿಗುಪ್ಸೆ ಪಟ್ಟರು. ಒಮ್ಮೆ ಕೊಡಿ ಘಾಸಿಗೊಳಿಸಿ ಅಂದೇ ಮನೆ ಬಿಟ್ಟು 'ಸಿದ್ಧಗಂಗೆಗೆ ಬಂದರು'.

ಆಗ ಪುಣ್ಯಮಯವಾದ ಈ ಕ್ಷೇತ್ರದಲ್ಲಿ ಶ್ರೀ ಅಟವಿ ಮಹಾಸ್ವಾಮಿಗಳು ಅಧಿಪತಿಗಳಾಗಿದ್ದರು. ಬಂದು ಸ್ವಾಮಿಗಳ ಶ್ರೀಚರಣದಲ್ಲಿ ಶರಣರಾಗಿ ಶಿಷ್ಯವೃತ್ತಿ ಮಾಡಿದರು. ಬಾಣಸಿಗರಾಗಿ ಗುರುಗಳ ಪ್ರಸಾದಕ್ಕೆ ಅಣಿ ಮಾಡಿದರು. ದಾಸೋಹ ಸೇವೆಯಲ್ಲಿ ತನು ಸವೆಸಿದರು. ಕ್ಷೇತ್ರದ ಸೇವಾಕೈಂಕರ್ಯಗಳನ್ನು ನಿಷ್ಕಾಮಯೋಗಿಗಳಾಗಿ ದುಡಿದರು. ಶ್ರೀ ಉದ್ದಾನಶಿವಯೋಗಿ ನಾಮಧೇಯದಿಂದ ಮಠಾಧಿಪತಿಗಳಾದರು. ಅವರು ಲೌಕಿಕ ವಿದ್ಯೆಗಿಂತ ಆಧ್ಯಾತ್ಮಿಕ ವಿದ್ಯೆಯಲ್ಲಿ ಉನ್ನತಸ್ತರತಿ ಸಾಧಿಸಿದರು. ಮಠದಲ್ಲಿ ಆರ್ಥಿಕ ಭಂಡಾರವಿರಲಿಲ್ಲ; ಇದ್ದದ್ದು ಕೇವಲ ಜೋಳಿಗೆ ಅಷ್ಟೆ! ಶ್ರೀ ಉದ್ದಾನ ಶಿವಯೋಗಿಗಳ ತಪೋಬಲದಿಂದ ಜೋಳಿಗೆ ಅಕ್ಷಯ ಪಾತ್ರೆಯಾಯಿತು. ಮಠಕ್ಕೆ ಬಂದ ಭಕ್ತರಿಗೆ ''ಬೆಟ್ಟಕ್ಕೆ ಹೋಗಿ ಬನ್ನಿ. ಊಟಕ್ಕೆ ಹೋಗಿ ಬನ್ನಿ, ಕೆಲಕಾಲ ವಿರಾಮ ಪಡೆದು ಬನ್ನಿ'' ಎನ್ನುತ್ತಿದ್ದರು. ಬಂದ ಭಕ್ತರ ಕೈಯಲ್ಲಿ ರಾಗಿ ಬೀಸಿಸುತ್ತಿದ್ದರು. 'ಒಂದು ಸೇರು ರಾಗಿ ಬೀಸಿ ಹೋಗಿ' ಎಂದು ಅಪ್ಪಣೆ ಕೊಡಿಸುತ್ತಿದ್ದರು. ಇದರ ಗೂಢಾರ್ಥವಿಷ್ಟೇ: ಯಾರೇ ಆಗಲಿ ಎಲ್ಲಾದರು ಉಂಡರೆ, ಆ ಊಟದ ಋಣವನ್ನು ಒಂದಿಷ್ಟು ತೀರಿಸಿ ಹೋಗಬೇಕು. ನಾವು ಈ ಲೋಕಕ್ಕೆ ಬಂದವರು ಮಾತಾ-ಪಿತೃ ಋಣ, ಗುರು ಋಣ, ದೇವ ಋಣಗಳನ್ನು ತೀರಿಸಿಯೇ ಹೋಗಬೇಕೆಂಬುದು ಅವರ ಉದ್ದೇಶವಾಗಿತ್ತು. ಶ್ರೀ ಉದ್ದಾನ ಸ್ವಾಮಿಗಳು ಶ್ರೀಮಠದ ಋಣವನ್ನು ತಾವು ತೀರಿಸಿದರಲ್ಲದೆ ಅವರ ಶಿಷ್ಯರಿಂದಲೂ ತೀರಿಸುವ ಸತ್ಕಾರ್ಯ ಮಾಡಿದರು.

### *ಶ್ರೀಗಳ ವಿಶಾಲ ದೃಷ್ಟಿ*

'ಅನ್ನ ಇಟ್ಟ ನೆಲ ಚಿನ್ನದ ನೆಲ' ಆಗುವುದು ಎಂಬುದು ಶ್ರೀ ಉದ್ದಾನ ಶ್ರೀಗಳ ಆಶಯವಾಗಿತ್ತು. ಹೀಗಾಗಿ ಮಠ ಅನ್ನದಾಸೋಹ ಕೇಂದ್ರವಾಗಿ ರೂಪುಗೊಂಡಿತು. ೧೯೦೯ರಲ್ಲಿ ಮಹಾಶಿವರಾತ್ರಿಯ ಸಮಯದಲ್ಲಿ ರಥೋತ್ಸವವನ್ನು ಆರಂಭಿಸಿದರು. ಜನರ ಧಾರ್ಮಿಕ ಭಾವನೆ ಬಲಗೊಳಿಸುವ ಉತ್ಸವಾದಿ ಕಾರ್ಯಗಳಿಗೆ ನಾಂದಿ ಹಾಡಿದರು. ದನಗಳ ಜಾತ್ರೆಯಿಂದ ರೈತರ ಸಂಘಟನೆ ಬೆಳೆಯಲು ಅನುವು ಮಾಡಿಕೊಟ್ಟರು. ರಾಸುಗಳ ವಿನಿಮಯ, ಮಾರಾಟದಿಂದ ದೃಷ್ಟಿವಿಜ್ಞಾನ ಬೆಳೆಯಲು ಸಹಕಾರಿಯಾದರು. ಬರುವ ಜನರಿಗೆ ಒಡಲು ತಣಿಸಿದರು. ಸಾಂಸ್ಕೃತಿಕ ಕಾರ್ಯಗಳಿಂದ ಮನರಂಜನೆ ಒದಗಿಸಿದರು. ರಾಸುಗಳಿಗೆ ನೀರು-ನೆರಳು ಒದಗಿಸುವಲ್ಲಿ ವಿಶೇಷ ಆಸ್ಥೆ ವಹಿಸಿದ್ದು ಅನುಕರಣೀಯ ಸಂಗತಿಯಾಗಿತ್ತು. ಜನ ರೈತರು ಮೊದಲು ಬಿಟ್ಟ ತರಕಾರಿ ಬೆಳೆದ ಧವಸ, ಧಾನ್ಯ, ಊಟದ ಎಲೆ ಹೊತ್ತು ತಂದು ಭಕ್ತಿ ಕಾಣಿಕೆ ಸಲ್ಲಿಸಿದರು.

ವಿದ್ಯೆಯಿಂದಲೇ ರಾಷ್ಟ್ರದ ಪ್ರಗತಿ ಎಂಬುದು ಶ್ರೀಗಳ ಮಹದಾಶಯವಾಗಿತ್ತು. ಎಲ್ಲಾ ಜನಾಂಗದವರಿಗೂ ಆಶ್ರಯ ನೀಡಿದರು. ೧೯೧೭ರಲ್ಲಿ ಮಠದಲ್ಲಿ ಸಾರ್ವಜನಿಕ ಉಚಿತ ಅಶನ ವಸತಿಯ ವಿದ್ಯಾರ್ಥಿನಿಲಯ ತೆರೆದರು. ಇದು ಶ್ರೀ ಉದ್ಧಾನ ಶಿವಯೋಗಿಗಳ ಸಮಕಾಲೀನ ಧರ್ಮಕ್ಕೆ ಸ್ಪಂದಿಸಿದ ರೀತಿ, ಸರ್ಕಾರ ಸಾರ್ವಜನಿಕ ವಿದ್ಯಾರ್ಥಿ ನಿಲಯ ತೆರೆಯಲು ಹೆದರುತ್ತಿದ್ದ ಕಾಲದಲ್ಲಿ ಶ್ರೀಗಳ ಈ ಕ್ರಾಂತಿಕಾರಕ ಯೋಜನೆ ಮಾನವೀಯ ನೆಲೆಗಟ್ಟಿನ ಮೇಲೆ ಮೂಡಿ ಬಂದದ್ದು. ಮಠ ಸರ್ವಜನಾಂಗದ ತೋಟವಾಗಿ ರೂಪುಗೊಳಿಸಿದ ಕೀರ್ತಿ ಶ್ರೀ ಉದ್ದಾನ ಶ್ರೀಗಳದು.

ಸಂಸ್ಕೃತಭಾಷೆ ಸಕಲ ಸಂಪನ್ನವಾದ ಭಾಷೆ, ಶ್ರೀಮಂತ ಭಾಷೆ, ಜಗತ್ತಿನಲ್ಲಿರುವುದೆಲ್ಲಾ ಅದರಲ್ಲಿತ್ತು. ಸಂಸ್ಕೃತ ಕಲಿಕೆಯಿಂದ ಮಾನವ ಮಾನಸಿಕವಾಗಿ, ಬೌದ್ಧಿಕವಾಗಿ ಬೆಳೆಯುತ್ತಾನೆ. ಸಂಸ್ಕೃತವು ಅರಿವಿನ ಆಗರ, ನಮ್ಮ ಸಂಸ್ಕೃತಿಯ ಹೃದಯ ಎಂಬ ಕಾರಣದಿಂದ ಶ್ರೀಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆ ಆರಂಭಿಸಿದರು. ಅದು ಇಂದು ಮಹಾಪಾಠಶಾಲೆಯಾಗಿ ವಿರಾಜಿಸುತ್ತ ಕ್ಷೇತ್ರವನ್ನು ಪಂಡಿತರ ಕ್ಷೇತ್ರ, ಶಾರದಾಮಂದಿರ ಎಂದೆನಿಸಿದೆ, ಎಲ್ಲ ಜನಾಂಗದವರೂ ಸಂಸ್ಕೃತಭಾಷೆ ಕಲಿಯುವ ಅವಕಾಶ ಕಲ್ಪಿಸಿದ ಶ್ರೀಗಳವರ ದೂರದೃಷ್ಟಿ ಕ್ರಾಂತಿಕಾರಕವಾದುದು.

ತಮ್ಮ ೨೫ನೇ ವಯಸ್ಸಿನಲ್ಲಿಯೇ ಮಠಾಧಿಪತಿಗಳಾದ ಶ್ರೀ ಉದ್ಧಾನ ಶ್ರೀಗಳವರು ೮೦ನೆಯ ವಯಸ್ಸಿನ ತನಕ ಕ್ಷೇತ್ರದ ಸರ್ವಾಂಗೀಣ ಪ್ರಗತಿಗಾಗಿ ಅಹರ್ನಿಶಿ ದುಡಿದರು.

*ಗುರುಕಾರುಣ್ಯದ ಶಿಶು*

ಶ್ರೀಗಳು ಮರುಳಾಧ್ಯರನ್ನು ಉತ್ತರಾಧಿಕಾರಿಗಳನ್ನಾಗಿ ನೇಮಿಸಿಕೊಂಡಿದ್ದರು. ಅವರು ೧೯೩೦ರಲ್ಲಿ ಶಿವೈಕ್ಯರಾದರು. ಆಗ ಶತಮಾನದ ಶಕಪುರುಷರೆನಿಸಿದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳನ್ನು ಆರಿಸಿಕೊಂಡರು. ಶ್ರೀ ಉದ್ದಾನ ಶ್ರೀಗಳ ಕನಸನ್ನು ನನಸು ಮಾಡಿದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳ ಪೂರ್ವಾಶ್ರಮದ ಹೆಸರು ಶಿವಣ್ಣ. ಅವರ ಊರು ಬೆಂಗಳೂರು ಜಿಲ್ಲೆ, ಮಾಗಡಿ ತಾಲ್ಲೂಕು, ವೀರಾಪುರ. ಅದು ಶಿವಗಂಗೆಯ ಸನಿಹದಲ್ಲಿದೆ. ಶ್ರೀ ಶ್ರೀಗಳು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಬಿ.ಎ. ಪದವೀಧರ ಎನಿಸಿದುದ್ದು ಶ್ರೀ ಉದ್ದಾನ ಶಿವಯೋಗಿಗಳ ಬಳಿ ೧೧ ವರ್ಷಗಳ ಕಾಲ ಶಿಷ್ಯತ್ವ ಮಾಡಿ, ಅವರ ಮಾರ್ಗದರ್ಶನದಲ್ಲಿ ನಡೆದು, ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬ ದಿವ್ಯನಾಮದಿಂದ ಬೆಳಗಿದರು.

ನಡೆದಾಡುವ ದೇವರೆನಿಸಿದ ಶ್ರೀ ಶ್ರೀಗಳ ಸಾಧನೆಯಿಂದ ಶ್ರೀಕ್ಷೇತ್ರ ಎಂಟು ಸಾವಿರ ವಿದ್ಯಾರ್ಥಿಗಳ ಬೃಹತ್ ವಸತಿ ನಿಲಯವಾಯಿತು. ವಿವಿಧ ಶಾಲೆ-ಕಾಲೇಜುಗಳಿಂದ ವಿಜೃಂಭಿಸಿತು. ಸಾವಿರಾರು ಮಂದಿ ಗುರುವೃಂದ, ಸಂಸ್ಕೃತಭಾಷಾ ಶಿಕ್ಷಣದೊಂದಿಗೆ, ಆಧುನಿಕ ಶಿಕ್ಷಣವು ಸಹ ಜೊತೆಗೂಡಿತು. ಕನ್ನಡ ನಾಡಿನ ತುಂಬ ನಾನಾ ವಿಧದ ಶಾಲೆಗಳು ತೆರೆಯಲ್ಪಟ್ಟವು. ಶ್ರೀ 'ಶ್ರೀಗಳ ತಪದ ಪ್ರಭಾವದಿಂದ ಸುವರ್ಣಯುಗ ಆರಂಭವಾಯಿತು. ಶ್ರೀ ಸಿದ್ಧಗಂಗಾ ಮಠವು ದಕ್ಷಿಣದ ಶಾಂತಿನಿಕೇತನ ಎನಿಸಿತು. ಇಂದು ಶ್ರೀಕ್ಷೇತ್ರವನ್ನು ಹೋಲಿಸುವುದಾದರೆ ಸಾಗರಕ್ಕೆ ಹೋಲಿಕೆ ಸಾಗರ, ಗಗನಕ್ಕೆ ಹೋಲಿಕೆ ಗಗನ ಹೇಗೋ ಹಾಗೆಯೇ ಶ್ರೀ ಸಿದ್ಧಗಂಗಾಕ್ಷೇತ್ರಕ್ಕೆ ಮಾತ್ರವೇ ಹೋಲಿಸಬಹುದಷ್ಟೆ! ಶ್ರೀ ಶ್ರೀಗಳನ್ನು ಹೋಲಿಸುವುದಾದರೆ ೧೨ನೆಯ ಶತಮಾನದ ಅಣ್ಣ ಬಸವಣ್ಣನವರಿಗೆ ಮಾತ್ರವೇ ಹೋಲಿಸಬಹುದಾಗಿದೆ.

ಶ್ರೀ ಉದ್ಧಾನ ಶಿವಯೋಗಿಗಳು ಧರ್ಮದ ತಳಹದಿಯ ಮೇಲೆ ಲೋಕಕಲ್ಯಾಣ ಕಾರ್ಯ ಮಾಡಿದರು. ಅನ್ನ-ಜ್ಞಾನಗಳೆರಡನ್ನು ಬಂದವರಿಗೆ ಉಣಬಡಿಸಿದರು. 'ಸಿದ್ಧಗಂಗೆಗೆ ಹೋದ್ರೆ ಪ್ರಸಾದಕ್ಕೆ (ಮುದ್ದೇಗೆ) ಎಂಗೆ ಅನ್ನಬೇಕಾ' ಎಂಬ ನಾಣ್ನುಡಿ ಹುಟ್ಟುವಂತೆ ಮಾಡಿದರು. ಈ ಮಹಾತಪಸ್ವಿಗಳು ೧೯೧೫ನೆಯ ಇಸವಿ ಜನವರಿ ೧೧ರಂದು ಲಿಂಗೈಕ್ಯರಾದರು.

*ಉದಯರವಿಯಾಗಿ ಹೊಂಗಿರಣ ಬೀರಿದ*
*ವರ ಗುರುದೇವ ಶ್ರೀ ಉದ್ಧಾನ ಶಿವಯೋಗಿ ।*
*ಮಹಾಮಹಿಮರ ಕನಸು ನನಸಾಗಿ*
*ಸುಕ್ಷೇತ್ರ ಸಿದ್ಧಗಂಗೆ ಆಗಿದೆ ಜನಾನುರಾಗಿ ॥*
*ಅನ್ನ-ಜ್ಞಾನದ ಹೊಳೆ ನಿತ್ಯ ಹರಿದಿದೆ ಹುಲುಸಾಗಿ*
*ಮನವ ಮಡಿಮಾಡಿ ತನುವ ಗುಡಿಮಾಡಿದೆ ।*
*ಭವ್ಯ ಭಾರತದ ಭವ್ಯ ಇತಿಹಾಸದಲ್ಲಿ*
*ಧರ್ಮದ ಪತಾಕೆಯ ನಭೋಮಂಡಲದಿ ಹಾರಿಸಿದೆ ॥*

❖

**ಶ್ರೀವಾಣಿ**

ಕಳೆಯುವ ಪ್ರತಿಯೊಂದು ಕ್ಷಣವೂ ಒಂದಲ್ಲ ಒಂದು ರೀತಿಯಲ್ಲಿ ಜೀವನಕ್ಕೆ ಕಾಣಿಕೆಕೊಟ್ಟು ಜೀವನವನ್ನು ಮೇಲಕ್ಕೆ ಎತ್ತಬೇಕು. ಕಾಲದ ಯೋಗ್ಯ ಉಪಯೋಗ ಅರಿತರೆ ನಾವು ದೊಡ್ಡವರಾಗುತ್ತೇವೆ. ಕಾಲದ ಬೆಲೆ ತಿಳಿದು ಸುವ್ಯವಸ್ಥಿತವಾದ ಕ್ರಮಬದ್ಧ ಜೀವನದಿಂದ ಗಾಂಧೀಜಿ ದೊಡ್ಡವರಾದರು, ಮಹಾತ್ಮರಾದರು.





## ವಚನಗಳ ವಿಶ್ಲೇಷಣೆ

*ಒಲೆ ಹತ್ತಿ ಉರಿದರೆ ನಿಲಬಹುದಲ್ಲದೆ*
*ನೆಲ ಹತ್ತಿ ಉರಿದರೆ ನಿಲಬಾರದು !*
*ಏರಿ ನೀರುಂಬೊಡೆ, ಬೇಲಿ (ಕೈಯ) ಮೇವೊಡೆ*
*ನಾರಿ ತನ್ನ ಮನೆಯಲ್ಲಿ ಕಳುವೊಡೆ*
*ತಾಯ ಮೊಲೆವಾಲು ನಂಜಾಗಿ ಕೊಲುವೊಡೆ ಇನ್ನಾರಿಗೆ ದೂರುವೆ?!*
*ತಂದೆ ಕೂಡಲ ಸಂಗಮದೇವ,*
*ನೀ ಹುಟ್ಟಿಸಿ ಜೀವನ ಭವದುಃಖಿಯ ಮಾಡಿದ ಬಳಿಕ*
*ಬಿಡಿಸುವರಾರುಂಟು?*

ಸರ್ವವ್ಯಾಪಕನೂ, ಸರ್ವಾಧಾರನೂ, ಸರ್ವಸಂರಕ್ಷಕನೂ, ಸರ್ವಾಧ್ಯಕ್ಷನೂ, ಸರ್ವೋತ್ಪತ್ತಿ ಮೂಲಸ್ವರೂಪನೂ ಆದ ಅಭವನು ತನ್ನ ಅಭಯಹಸ್ತವನ್ನು ಜೀವರ ನೆತ್ತಿಯ ಮೇಲಿಟ್ಟು ವರದನಾಗುವವರೆಗೆ ಆ ಜೀವರಿಗೆ ಭವರಾಟಾಳದ ಬವಣೆ ತಪ್ಪುವುದಿಲ್ಲ, ಜೀವನ್ಮುಕ್ತಿ ಲಭಿಸುವುದಿಲ್ಲ – ಎಂಬುದನ್ನು ಬಸವಣ್ಣನವರು ಕ್ರಮವಾಗಿ ಈ ಮುಂದಣ ಐದು ನಿದರ್ಶನಗಳೊಡನೆ ಸಮರ್ಥಿಸುವರು;

ಒಲೆ ಹತ್ತಿ ಉರಿದರೆ ಕೆಲಕ್ಕೆ ಸರಿದು ನಿಲ್ಲಬಹುದು; ನೆಲವೇ ಹತ್ತಿ ಉರಿದರೆ ಸರಿದು ನಿಲ್ಲುವುದಿನ್ನೆಲ್ಲಿ? ಕೆರೆಯ ನೀರನ್ನು ನಿಲ್ಲಿಸಿರುವ ಏರಿಯೇ ಆ ನೀರನ್ನೆಲ್ಲಾ ಹೀರಿದರೆ ಆ ನೀರನ್ನುಳಿಸುವುದಿನ್ನೆಂತು? ತುಡುಗು ದನಗಳ ಬಾಯಿಂದ ಕಾಯಬೇಕಾದ ಬೇಲಿಯೇ ಆವರಿಸಿಬಂದು, ಹೊಲವನ್ನು ಮೇದರೆ, ಬೆಳೆಯ ಪಾಡೇನು? ಗೃಹಲಕ್ಷ್ಮಿಯಾದ ಗೃಹಿಣಿಯೇ ಮನೆಯಲ್ಲಿರುವುಧನ್ನು ಕದಿಸುವುದಾದರೆ ಮನೆಯ ಸಂಪತ್ತನ್ನು ಸಂರಕ್ಷಿಸುವರಾರು? ತಾಯ ಮೊಲೆಹಾಲೇ ನಂಜಾಗಿ ಕಂದನನ್ನು ಕೊಲ್ಲುವುದಾದರೆ ಆ ಕಂದನು ಬೆಳೆದು ಬಾಳುವ ಬಗೆಯೆಂತು – ಎಂದು.

ಈ ವಚನದ ಮೊದಲಿಗೆ ಬಂದಿರುವ ಒಲೆ ಮತ್ತು ನೆಲದ ನಿದರ್ಶನದಿಂದ ಧ್ವನಿಕವಾಗುವ ಬಸವಣ್ಣನವರ ಮತ್ತೊಂದು ಸಂದೇಶವೇನೆಂದರೆ – ಸಾಧಕನಾದವನು ಹೆದರಬೇಕಾದುದು ಜಗತ್ತಿನ ಉರುವಣೆಗಲ್ಲ, ಸರ್ವಾಂತರ್ಯಾಮಿಯಾದ ಪರಮಾತ್ಮನ ಆಗ್ರಹಕ್ಕೆ – ಎಂದು.

*ಹಾಲೆಂಜಲು ಪೇಯನ !*
*ಉದಕವೆಂಜಲು ಮತ್ಸ್ಯದ !*
*ಪುಷ್ಪವೆಂಜಲು ತುಂಬಿಯ !*
*ಎಂತು ಪೂಜಿಸಿವೆ? ಶಿವ ಶಿವಾ ಎಂತು ಪೂಜಿಸುವೆ !?*
*ಈ ಎಂಜಲವನತಿಗಳೆವಡೆ ಎನ್ನಳವಲ್ಲ*
*ಬಂದುದ ಕೈಕೋ ಕೂಡಲಸಂಗಮದೇವ !*

ಜನ ಕಾಮದ ಅಮಲಿನಲ್ಲಿ ವೇಶ್ಯೆಯ ಎಂಜಲ ತುಂಬುಲವನ್ನು ತಿನ್ನುವರು. ನಾಲಗೆಯ ಚಾಪಲ್ಯದಲ್ಲಿ ನಾಯ ಎಂಜಲಾದ ಬೇಟೆಯ ಮೃಗವನ್ನು ತಿನ್ನುವರು. ಆದರೆ ಜಂಗಮಪ್ರಸಾದವನ್ನು ಲಿಂಗಕ್ಕರ್ಪಿಸಿಕೊಂಬ ಸಂಪ್ರದಾಯವನ್ನು ಎಂಜಲೆಂದು ಅಲ್ಲಗಳೆಯುವರು – ಎಂದು ಬಸವಣ್ಣನವರು ತಮ್ಮ ಒಂದು ವಚನದಲ್ಲಿ ಕಟುವಾಗಿ ಟೀಕಿಸಿರುವರು.

ಈ ಟೀಕೆಯ ಹಿನ್ನೆಲೆಯಲ್ಲಿ ಈ ವಚನದ ಭಾಗವನ್ನು ಮನಗಾಣಬೇಕು.

ಎಂಜಲೆಂದು ಹೊರಟರೆ ದೇವರಿಗರ್ಚಿಸಿ ನಿವೇದಿಸಲೇನೂ ದೊರೆಯದು ! ಲಿಂಗದ ಮಜ್ಜನಕ್ಕೆರೆಯುವ ನೀರು ಮೀನೆಂಜಲು, ಅದರ ತಲೆಗೇರಿಸುವ ಹೂವು ದುಂಬಿಯೆಂಜಲು, ಅರ್ಪಿಸುವ ಹಾಲು ಕರುವಿನೆಂಜಲು ! ಮತ್ತೆ ಪೂಜಿಸುವ ಬಗೆ ಹೇಗೆ? ಬಗೆಬಗೆಯ ಬಣ್ಣದ ಸುಂದರ ಪುಷ್ಪಗಳನ್ನೇರಿಸಿ ಕಣ್ಣಾರೆ ನೋಡದಿದ್ದರೆ ಮನ ನಿಲ್ಲದು, ಹಾಲನ್ನರ್ಪಿಸದಿದ್ದರೆ ಜೀವ ತಣಿಯದು – ಎಲೆ ದೇವರೆ, ನನ್ನ ಅರ್ಚನೆ ಅರ್ಪಣೆಗಳಲ್ಲಿ ಏನು ಕುಂದು ಕೊರತೆಯಿದ್ದರೂ ಅದನ್ನು ನಾನು ಕಳೆಯಲಾರೆ – ಭಕ್ತಿಯಿಂದ ಕೊಟ್ಟುದನ್ನು ನೀನು ಕೈಕೊಂಡು ಕಾಪಾಡೆಂದು ಬಸವಣ್ಣನವರು ಪ್ರಾರ್ಥಿಸುತ್ತಿದ್ದಾರೆ.

*ಮಾರಿ-ಮಸಣಿಯೆಂಬಿವು ಬೇರಿಲ್ಲ ಕಾಣಿರೋ !*
*ಮಾರಿಯೆಂಬುದೇನು?*
*ಕಂಗಳು ತಪ್ಪಿ ನೋಡಿದರೆ ಮಾರಿ !*
*ನಾಲಗೆ ತಪ್ಪಿ ನುಡಿದರೆ ಮಾರಿ !*
*ನಮ್ಮ ಕೂಡಲಸಂಗಯ್ಯನ ನೆನಹ ಮರೆದರೆ ಮಾರಿ !*

ಮಾರಿ-ಮಸಣಿಯೆಂದರೆ ಹೆದರುವರು. ಅವಳ ಕಡೆಯಿಂದೊದಗುವ ಸಾವನ್ನು ನೆನೆದು ತತ್ತರಿಸಿ ಕುರಿಕೋಳಿಗಳನ್ನು ಬಲಿಕೊಟ್ಟು ಬಾಯ್ಗೆಟ್ಟು ಬೇಡಿಕೊಳ್ಳುವರು. ಬರುವ ಕುತ್ತಿನಿಂದ ಪಾರಾಗುವ ದಾರಿಯಿದಲ್ಲ. ಮಾರಿಯೆಂಬುವಳೇನು ಕೇವಲ ಊರಿನ ಹೊರಗಿರುವಳೇನು? ಆ ಮಾರಿ ನಮ್ಮ ಮೈಮನಸ್ಸುಗಳಲ್ಲಿರುವಳು ! ತಪ್ಪಿ ನೋಡುತ್ತಿರುವ ಕಣ್ಣಲ್ಲಿ ಕಿಡಿ ಕಾರುತ್ತಿರುವಳು. ತಪ್ಪು ನುಡಿಯುತ್ತಿರುವ ನಾಲಗೆಯಲ್ಲಿ ವಿಕಟಾಟ್ಟಹಾಸ ಮಾಡುತ್ತಿರುವಳು. ದೇವರ ಧ್ಯಾನವನ್ನು ಮರೆತಿರುವ ಮನಸ್ಸಿನಲ್ಲಿ ಮನೆ ಮಾಡಿರುವಳು !

ಶೀಲವನ್ನು ಸಂಪಾದಿಸದೆ, ಸತ್ಯವನ್ನು ನುಡಿಯದೆ, ದೇವರ ಧ್ಯಾನವನ್ನು ಮಾಡದೆ ಹಾಳಾಗಿ, ಪರರು ನನ್ನನ್ನು ಕೊಂದರೆನ್ನ ಬೇಡ. ನಿನ್ನ ಕಣ್ಣು-ಮನ-ನಾಲಗೆಯೇ ನಿನ್ನನ್ನು ಕೊಲ್ಲುವ ಕ್ರೂರ ಮಾರಿಗಳು, ಅವನ್ನು ಸಾತ್ವಿಕಗೊಳಿಸಿಕೋ !

*ಇವನಾರವ, ಇವನಾರವ, ಇವನಾರವನೆಂದೆನಿಸದಿರಯ್ಯ !*
*ಇವ ನಮ್ಮವ, ಇವನ ನಮ್ಮವ, ಇವನ ನಮ್ಮವನೆಂದೆನಿಸಯ್ಯ !*
*ಕೂಡಲ ಸಂಗಮದೇವ, ನಿಮ್ಮ ಮನೆಯ ಮಗನೆಂದೆನಿಸಯ್ಯ !*

ಸಜ್ಜನರಿಂದ ಬಾಹಿರನಾಗಿ ಬದುಕುವ ಕೀಳುಬಾಳು ನನಗೆ ಬೇಡ, ಶಿಷ್ಟಜನಗೋಷ್ಠಿಯ ಕಣ್ಣಿಗೆ ನಾನು ಬಿದ್ದಾಗ, ''ಇವನು ಯಾರೋ! ನಮ್ಮವನಲ್ಲ; ಈ ಹೀನವಾದ ನಡೆನುಡಿಯವನು ನಮ್ಮವನು ಹೇಗಾದನು?'' ಎನಿಸಿಕೊಳ್ಳುವಂತಹ ನಿಕೃಷ್ಟ ರೀತಿನೀತಿಗಳು ನನಗೆ ಬೇಡ! ಅದಕ್ಕೆ ಬದಲಾಗಿ ''ಇವನು ನಮ್ಮವ ತಮ್ಮವ''ನೆಂದು ಸಜ್ಜನರು ಮಮಕರಿಸಿ ಮಾತನಾಡಿಕೊಳ್ಳುವಂತಹ ಹಸನಾದ ಬಾಳನ್ನು ನಡೆಸಬೇಕೆಂಬುದೇ ನನ್ನಿಚ್ಛೆ.

ದೇವರೇ, ನನ್ನನ್ನು ಕಂಡ ಜನ, ಇವನು ದೇವರ ಮಗ, ಶಿವನ ಸತ್ಪುತ್ರನೆಂಬಂತೆ ಉದ್ಧರಿಸಿ, ತಿದ್ದಿ ರೂಪಿಸು !

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*

# ಅಷ್ಟಾವರಣ

(ಕಳೆದ ಸಂಚಿಕೆಯಿಂದ)

– ಟಿ.ಆರ್. ಮಹಾದೇವಯ್ಯ
136, 1ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ
ಜ್ಞಾನಭಾರತಿ 2ನೇ ಹಂತ,
ಬೆಂಗಳೂರು – 560 092.

## ಜಂಗಮ

*ವೇದಶಾಸ್ತ್ರಕತೀಕ ಜಂಗಮವು ಚಿ-*
*ನ್ನಾದ ಚಿದ್‌ಬಿಂದು ಚಿತ್‌ಕಳೆಯೆ ಜಂಗಮವು ಭ-*
*ಕ್ತಾದಿ ಮಹೇಶ ಪ್ರಸಾದಿಯ ಸುಲಿಂಗ ಶರಣೈಕ್ಯ ಷಟ್‌ಸ್ಥಲ ಜಂಗಮಂ*
*ಸಾಧಿಸುವೆನೆಂಬರಿಗಸಾಧ್ಯವಹ ಜಂಗಮವು*
*ಭೇದಿಸುವೆನೆಂಬರಿಗಸಾಧ್ಯವಹ ಜಂಗಮವು*
*ಮೂದೇವತಾರಾಧ್ಯಗತತ್ತ ಜಂಗಮದ ದಾಸೋಹಿಭಕ್ತನಧಿಕಂ*

(ಮೈಲಾರ. ೧-೮)

ಜಂಗಮವೆಂದರೆ ಚೈತನ್ಯವೆಂದರ್ಥ. ಜಗತ್ತಿನ ಜೀವಜಂತುಗಳೆಲ್ಲ ಜಂಗಮವೇ. ವೀರಶೈವಧರ್ಮದಲ್ಲಿ ಜಂಗಮ ಶಬ್ದಕ್ಕೆ ಚರ, ಮಾಹೇಶ್ವರ, ಶಿವಯೋಗಿಗಳೆಂಬ ಪರ್ಯಾಯ ಪದಗಳಿವೆ. ವೀರಶೈವ ಧರ್ಮದಲ್ಲಿ ಜಂಗಮನ ಸ್ಥಾನವು ಮೇಲಾದುದಾಗಿದೆ. ಗುರುಲಿಂಗಗಳ ಚೈತನ್ಯವೇ ಜಂಗಮ. ಗುರುವು ಧಾರ್ಮಿಕ ಸಂಸ್ಕಾರಗಳನ್ನು ಮಾಡಿ ಧರ್ಮ ಬೋಧೆ ಮಾಡಿದರೆ, ಜಂಗಮನು ಅಂಥ ಧರ್ಮವನ್ನು ರಕ್ಷಣೆ ಮಾಡುತ್ತಾರೆ. ಅಂದರೆ ಗುರು ಬೋಧಿಸಿದ ಧಾರ್ಮಿಕ ಆಚಾರ-ವಿಚಾರಗಳು ಸಮಾಜದಲ್ಲಿ ಸರಿಯಾಗಿ ನಡೆಯುತ್ತವೋ ಇಲ್ಲವೋ ಎಂಬುದನ್ನು ನೋಡುವ ಗುರುತರ ಹೊಣೆ ಆತನದು.

ಗುರುವು ಶಿಷ್ಯನಿಗೆ ಲಿಂಗವನ್ನು ಕೊಡುವುದರ ಜೊತೆಗೆ ಜಂಗಮವನ್ನೂ ನೀಡುತ್ತಾನೆ. ಏಕೆಂದರೆ ಲಿಂಗದ ಮುಖ ಜಂಗಮ. ಲಿಂಗವು ಗರ್ಭದಲ್ಲಿರುವ ಶಿಶುವಾದರೆ, ಜಂಗಮ ತಾಯಿ. ತಾಯಿ ತೃಪ್ತಿಪಟ್ಟರೆ ಶಿಶುವು ತೃಪ್ತಿಪಡುತ್ತದೆ. ಅದಕ್ಕೇ ಬಸವಣ್ಣನವರು 'ಮರಕ್ಕೆ ಬಾಯಿ ಬೇರೆಂದು ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡಾ. ಲಿಂಗದ ಬಾಯಿ ಜಂಗಮವೆಂದು ಪಡಿಪದಾರ್ಥವ ನೀಡಿದರೆ ಮುಂದೆ ಸಕಲಪದಾರ್ಥನೀವನು' (ಬಸವ. ೪೨೦).

ಜಂಗಮಕ್ಕೆ ನೀಡುವಲ್ಲಿ ಒಂದು ವೈಶಿಷ್ಟ್ಯವಿದೆ. ಜಂಗಮನು ಭೋಗಮೂರ್ತಿ. 'ಜಂಗಮಕ್ಕೆ ನೀಡಿದ ತೃಪ್ತಿ ಜಗಕ್ಕೆಲ್ಲಾ ತೃಪ್ತಿಯಾಯಿತ್ತು. ಹರಿಸುರಬ್ರಹ್ಮಾದಿಗಳಿಗೆಲ್ಲ ತೃಪ್ತಿಯಾಯಿತು. ಸಾಕ್ಷಾತ್ ಪರಬ್ರಹ್ಮ ಪರಶಿವಂಗೆ ತೃಪ್ತಿಯಾಯಿತು' (ಅಖಂಡೇ. ೬೧-೧೨). ಇಂಥ ಜಂಗಮನನ್ನು ಜಗದೀಶನೆಂದು ನಂಬದವನ ಜನ್ಮ ಹಾಳು. ಭಕ್ತನು ಜಂಗಮನಿಗೆ ತನ್ನ ಧನವನ್ನು ನೀಡಬೇಕು. ಅಂದರೆ ನನ್ನದು, ನಾನು ದುಡಿಯುತ್ತೇನೆ ಎಂಬ ಮಮಕಾರಗಳನ್ನು ಬಿಟ್ಟು ದಾಸೋಹಂಭಾವದಿಂದ ಜಂಗಮಕ್ಕೆ ಅರ್ಪಿಸಬೇಕು. ಅವರಿಂದ ಮತ್ತೆ ಪ್ರಸಾದರೂಪವಾಗಿ ಬಂದುದನ್ನು ಉಪಭೋಗಿಸಬೇಕು.

ಇಲ್ಲಿ ಇನ್ನೂ ಒಂದು ಸೂಕ್ಷ್ಮವಿಚಾರವಿದೆ. ಜಂಗಮನು ಆಚಾರನಿಷ್ಠನಿದ್ದು ಲೋಭರಹಿತನಾಗಿರುತ್ತಾನೆ. 'ಬೇಡಲಾಗದು ಜಂಗಮ, ಬೇಡಿಸಲಾಗದು ಭಕ್ತ' (ಸಿದ್ದವ. ೩೮೨). ಬೇಡುವಾತ ಜಂಗಮನಲ್ಲ; ಕಾಂಚನವನ್ನು ಕಾಷ್ಠವೆಂದು ಬಗೆವ ವಿರಾಗಿ. ಈತನಿಗೆ ಭಕ್ತನು ಸಲ್ಲಿಸುವ ಧನ ಹೇಗೆ ವಿನಿಯೋಗವಾಗಬೇಕು? ಜಂಗಮನು ಭಕ್ತನು ಅರ್ಪಿಸಿದ್ದನ್ನು ತನ್ನದೆಂದು ಭಾವಿಸಿದೆ, ಶಿವಪ್ರಸಾದವೆಂದು ಭಾವಿಸಿ, ಸಮಾಜದಲ್ಲಿ ಜ್ಞಾನಪ್ರಸಾರ ಹಾಗೂ ಧರ್ಮ ರಕ್ಷಣೆಗೆ ವಿನಿಯೋಗಿಸುತ್ತಾನೆ.

ಜಂಗಮದ ಮಹತ್ವವನ್ನರಿತೇ ಬಸವಣ್ಣನವರು 'ಲಿಂಗದಲಿ ದಿಟವನರಸುವಡೆ ಜಂಗಮವ ನೆರೆ ನಂಬುವುದು (ಬಸವ. ೪೨೭) ಎಂದೂ, ಅಕ್ಕ 'ಜಂಗಮವೆನ್ನ ಪ್ರಾಣ. ಜಂಗಮವೆನ್ನ ಜೀವ, ಜಂಗಮವೆನ್ನ ನಿಧಿನಿಧಾನ, ಜಂಗಮವೆನ್ನ ಪುಣ್ಯದ ಫಲ, ಜಂಗಮವೆ ಹರುಷದ ತೊರೆ ... ಜಂಗಮದ ತಿಂಥಿಣಿಯೊಳಗೆ ಓಲಾಡುವೆ' (ಮಹಾದೇ. ೧೯೯) ಎಂದೂ ಅಭಿಪ್ರಾಯಪಟ್ಟಿದ್ದಾರೆ. ಜಂಗಮಸೇವೆಯ ಮಹತ್ವವು ಅಖಂಡೇಶ್ವರ ವಚನವೊಂದರಲ್ಲಿ ಬಹಳ ವಿಶಿಷ್ಟವಾದ ರೀತಿಯಲ್ಲಿ ನಿರೂಪಿತವಾಗಿದೆ. 'ಜಂಗಮಸೇವೆಯ ಒಂದೊಂದು ಹಂತವೂ ಸ್ವರ್ಗಕ್ಕೆ ಒಂದೊಂದು ಮೆಟ್ಟಿಲು' ಎಂಬುದನ್ನು ಷಣ್ಮುಖಸ್ವಾಮಿಗಳು ಹೀಗೆ ತಿಳಿಸುತ್ತಾರೆ – ಇವೇ ಆ ಸಪ್ತ ಸೋಪಾನಗಳು :

೧. ಜಂಗಮವ ಕಾಣುತ್ತ ಸದ್‌ಭಕ್ತ ಎದ್ದು ಸ್ವಾಗತಿಸುವುದು.
೨. ಮನಕರಗಿ ತನು ಉಬ್ಬಿ ಕಂಗಳಲ್ಲಿ ಆನಂದಭಾಷ್ಪ ತುಂಬಿ ಅವರ ಚರಣಕಮಲಕ್ಕೆ ಎರಗುವುದು.
೩. ತನ ಮನೆಗೆ ಬಿಜಯಂಗೈಸಿ, ಉನ್ನತಾಸನ ಕೊಟ್ಟು ಪಾದಪ್ರಕ್ಷಾಲನ ಮಾಡುವುದು.
೪. ಜಂಗಮದೇವರನ್ನು ಅಷ್ಟವಿಧಾರ್ಚನೆ, ಷೋಡಶೋಪಚಾರದಿಂದ ಅರ್ಚಿಸಿ ಪಾದತೀರ್ಥವ ಕೊಂಬದು.
೫. ಮೃಷ್ಟಾನ್ನ ಪಾನಂಗಳಿಂದ ತೃಪ್ತಿಪಡಿಸುವುದು.
೬. ಒಕ್ಕು ಮಿಕ್ಕ ಪ್ರಸಾದವ ಕೊಂಬುದು.
೭. ಜಂಗಮದಲ್ಲಿ ಅನುಭಾವದ ಬೆಸಗೊಂಬುದು.

– ಇಂತೀ ಸಪ್ತಸೋಪಾನಂಗಳ ಬಲ್ಲ ಸದ್ಭಕ್ತಂಗೆ ಕೈಲಾಸ ಕರತಲಾಮಲಕ. ಅಲ್ಲದೆ ತನುವ ಸವೆಸದೆ, ಮನವ ದಂಡಿಸದೆ ಧನವ ಸಮರ್ಪಿಸದೆ ಮಿಥ್ಯಾಸಂಸಾರದಲ್ಲಿ ಸಿಲುಕಿ ಹೊತ್ತುಗಳೆಂದು ಹೊಡೆದಾಡಿ ಸತ್ತುಹೋಗುವ ವ್ಯರ್ಥ ಜೀವರಾಗುವಂತಿಲ್ಲ.

(ಅಖಂಡೇ, ೭೪-೪೬)





## ವಿಭೂತಿ

*ಪ್ರಾಯಶ್ಚಿತ್ತೇಷು ಸರ್ವೇಷು ಭಸ್ಮ ನಾಮ ಯಥಾವಿಧಿ ।*
*ರಕ್ಷಾ ಚ ಮೋಕ್ಷಕಾರ್ಯೇಷು ಪ್ರಯೋಕ್ತವ್ಯಾ ಸದಾ ಬುಧೈಃ ॥*

(ಸಿದ್ಧಾಂತ, ೭-೧೦)

ವೀರಶೈವರ ಪುಜಾಸಾಧನಗಳಲ್ಲಿ ವಿಭೂತಿ ಮೊದಲನೆಯದು. ಇದನ್ನು ಭಸ್ಮವೆಂದೂ ಕರೆಯುತ್ತಾರೆ. ಇದು ಶಿವನ ಚಿತ್ಕಳೆ. ಇದನ್ನು ಹಸಿವಿನ ಬೆರಣೆಯಿಂದ ಹರಮಂತ್ರನ್ಯಾಸದಿಂದ ಶಿವಾಗ್ನಿಯಿಂದ ಸುಟ್ಟು ಶಿವಮಂತ್ರದಿಂದ ಶೋಧಿಸಿ ಮಾಡುತ್ತಾರೆ. ಇದು ಕಾಮಾದಿ ಅರಿಷಡ್ವರ್ಗಗಳನ್ನು ಸುಡುವುದಲ್ಲದೆ, ಅಣವ ಮಲ, ಮಾಯಾಮಲ ಮತ್ತು ಕಾರ್ಮಿಕಮಲಗಳನ್ನು ನಾಶಮಾಡುತ್ತದೆ. ಇದು ಭೂತಪಿಶಾಚಿಗಳ ಕಾಟದಿಂದ ಪಾರುಮಾಡುವ ರಕ್ಷೆ. ಇದು ಅದನ್ನು ಸಿದ್ಧಮಾಡುವ ವಿಧಾನದಿಂದ ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪ ಎಂದು ನಾಲ್ಕು ತೆರನಾಗಿರುವುದು. ಇದು ಅಷ್ಟೈಶ್ವರ್ಯಸಿದ್ಧಿಗೆ ಕಾರಣವಾದ್ದರಿಂದ ವಿಭೂತಿಯೆಂದೂ, ಶಿವತತ್ತ್ವವನ್ನು ಪ್ರಕಾಶಪಡಿಸುವುದರಿಂದ ಭಸಿತವೆಂದೂ, ಮನೋವಾಕ್ಕಾಯಗಳಲ್ಲಿ ಹುಟ್ಟುವ ತಾಪಗಳಿಗೆ ಭಯವನ್ನುಂಟುಮಾಡುವುದರಿಂದ ಭಸ್ಮವೆಂದೂ, ತಾಪತ್ರಯಗಳಿಂದ ಜನಿಸುವ ವಿಪತ್ತುಗಳನ್ನು ನಾಶಗೊಳಿಸುವುದರಿಂದ ಕ್ಷಾರವೆಂತಲೂ, ಗ್ರಹಯಕ್ಷಾದಿಗಳ ಭಯವಿಲ್ಲದಂತೆ ಕಾಪಾಡುವುದರಿಂದ ರಕ್ಷೆಯೆಂತಲೂ ಈ ಐದು ಹೆಸರುಗಳು ಬಂದಿವೆ. ಇದನ್ನು ಸ್ನಾನ, ಉದ್ಧೂಲನ, ಧಾರಣವೆಂಬ ಮೂರು ಬಗೆಯಿಂದ ಉಪಯೋಗಿಸಬೇಕು. ವಿಭೂತಿಯನ್ನು ಶಿವಪೂಜಾ ಸಂದರ್ಭದಲ್ಲಿ ಮಂತ್ರೋಚ್ಚಾರಣೆಯೊಡನೆ ಶರೀರದ ತಲೆ, ಹಣೆ, ಕುತ್ತಿಗೆ ಇತ್ಯಾದಿ ಹದಿನೈದು ಕಡೆ ಧರಿಸಿಕೊಳ್ಳಬೇಕು.

ಭಕ್ತನು ವಿಭೂತಿಯಿಂದ ತನ್ನ ದೇಹವನ್ನು ಅಲಂಕರಿಸಿಕೊಂಡು ಪೂಜೆ ಮಾಡಿದರೆ ಅದು ಎಷ್ಟು ಪುಣ್ಯದಾಯಕ, ಪಾಪಪರಿಹಾರಕ ಎಂಬುದನ್ನು ಶರಣರು ಮನದುಂಬಿ ಹಾಡಿದ್ದಾರೆ : 'ಕೂಡಲ ಶರಣರ ನೊಸಲಿಗೆ ವಿಭೂತಿಯೇ ಶೃಂಗಾರ' (ಬಸವ. ೭೪) ಎಂದ ಬಸವಣ್ಣನವರು, 'ಲಲಾಟದಲ್ಲಿ ವಿಭೂತಿ ಬರಲಿಕೆ ಪಾಪಪಲ್ಲಟವಾಗದೇ' (ಬಸವ. ೭೩) ಎಂದೂ, ಅಕ್ಕ 'ಶ್ರೀ ವಿಭೂತಿಯ ನೊಸಲಲ್ಲಿ ಧರಿಸಿ ದೃಷ್ಟಿವಾರೆ ನಿಮ್ಮ ನೋಡಲೊಡನೆ ಬೆಟ್ಟದಷ್ಟು ತಪ್ಪುಳೊಡೆಯು ಮುಟ್ಟಲೆಮ್ಮವು ನೋಡಾ' (ಮಹಾದೇ. ೨೧೮) ಎಂದೂ, ಸಿದ್ಧಲಿಂಗೇಶ್ವರರು 'ಅಡಿಗಡಿಗೆ ಭವಹರನ ನೆನವುತ್ತ ಭಸಿತವ ಧರಿಸುತ್ತ ಭವವ ತಪ್ಪಿಸಿಕೊಂಬ ಸುಖಕಿನ್ನು ಸರಿಯುಂಟೆ' (ಸಿದ್ದೇಶ್ವ. ೧೮೯) ಎಂದು ನುಡಿದಿದ್ದಾರೆ. ಷಣ್ಮುಖಸ್ವಾಮಿಗಳು 'ಶ್ರೀ ವಿಭೂತಿಯ ಅಂತರಂಗದಲ್ಲಿ ವಿಶ್ವಾಸ ತುಂಬಿ ಧರಿಸಿದ ಮನುಜನಿಗೆ ಅನಂತಕೋಟಿ ಪಾತಕಂಗಳು ಪರಿಹಾರವಾಗಿ ಮುಂದೆ ಶಿವಸಾಯುಜ್ಯಪದವು ದೊರೆಕೊಂಬುದು' (ಅಖಂಡೇ. ೩೮-೬) ಎಂದರೆ, ಸರ್ವಜ್ಞನು ಅದನ್ನು ಮತ್ತಷ್ಟು ಸ್ಪಷ್ಟಪಡಿಸಿದ್ದಾನೆ :

*ರುದ್ರಾಕ್ಷಿ ಭಸಿತವನು ಹೊದ್ದಿರಲು ದೇಹದೊಳ-*
*ಗಿದ್ದ ಪಾಪಗಳು ಬಯಲಾಗಿ ಶಿವನು ತಾ-*
*ನಿದ್ದಲ್ಲಿ ಬರುವ.*

(ಸರ್ವಜ್ಞ ೯೮)

ಶಿವತತ್ತ್ವ ಚಿಂತಾಮಣಿಯಲ್ಲಿ ಶಿವನು ಪಾರ್ವತಿಗೆ ವಿಭೂತಿಯ ಮಹತ್ವವನ್ನು ನಿರೂಪಿಸಿದ ಪ್ರಸಂಗವೊಂದಿದೆ. ಅಲ್ಲಿ ಶಿವನು "....ವಿಭೂತಿಯ ಧರಿಸಿಪ್ಪವರ ಮುದವನೇವಣ್ಣಿಸುವೆ. ತತ್ಫಲದ ಸಂಖ್ಯೆಯಂ ಸದುಹೃದಯರೆನ್ನ ಸದ್ಭಕ್ತರೇ ಬಲ್ಲರೌ ಕಾಂತೆ ಕೇಳು .... ಇದು ಮಹಾಪಾತಕವ ಸುಡುವಗ್ನಿ" (ಶಿವಚಿಂ. ೪೧-೨೮) ಎಂದಿದ್ದಾನೆ.

ಬಸವಲಿಂಗಶರಣರು ಕೂಡ

*ಶಿವನಿಂದಲಧಿಕವೆಂದನಿಪ ಚಿದ್‌ಭಸ್ಮವನು*
*ಆವಿರತಾಪಾದಮಸ್ತಕಪರ್ಯಂತರವು*
*ಸುವಿವೇಕಷಣ್‌ಮಂತ್ರಸ್ಮರಣೆಯಿಂದನವರತ ಧರಿಸುವರು ಸದ್‌ಭಕ್ತರು*

(ಮೈಲಾರ, ೧-೨೭)

ಎಂದು ವಿಭೂತಿಯ ಮಹಿಮೆಯನ್ನು ಸಾರಿದ್ದಾರೆ.

## ರುದ್ರಾಕ್ಷಿ

*ದರ್ಶನಾತ್ ಸ್ಪರ್ಶನಾಚ್ಚೈವ ಸ್ಮರಣಾದಪಿ ಪೂಜನಾತ್ ।*
*ರುದ್ರಾಕ್ಷಧಾರಣಾಲ್ಲೋಕೇ ಮುಚ್ಯಂತೇ ಪಾತಕೈರ್ಜನಾಃ ॥*

(ಸಿದ್ಧಾಂತ, ೭-೬೦)

ರುದ್ರಾಕ್ಷಿಯೆಂಬುದು ಒಂದು ಮರದ ಕಾಯಿ. ಒಳ್ಳೆಯ ಔಷಧಿಗುಣ ಈ ಕಾಯಿಗಳಿಗೆ ಇದೆ. ಇದು ರುದ್ರನ ಕಣ್ಣಿನಿಂದ ಹುಟ್ಟಿತು ಎಂಬ ನಂಬುಗೆಯಿದೆ. 'ಹಿಂದೊಮ್ಮೆ ಯೋಗಸಮಾಧಿಯಲ್ಲಿದ್ದ ಶಿವನು ತ್ರಿಪುರಸಂಹಾರಕ್ಕಾಗಿ ತ್ರಿನೇತ್ರಗಳನ್ನು ತೆರೆದು ನಿಟ್ಟಿಸಿದನೆಂದೂ, ಆಗ ಆ ಕಣ್ಣುಗಳಿಂದ ಉದುರಿದ ಕಂಬನಿಗಳು ಭೂಮಿಯಲ್ಲಿ ಬೀಜವಾಗಿ ಮೊಳೆತು ಮರಗಳಾದುವೆಂದೂ, ಆ ಮರದ ಕಾಯಿಗಳೇ ರುದ್ರಾಕ್ಷಿಗಳೆಂದೂ ಪುರಾತನ ಗ್ರಂಥಗಳು ಸಾರುತ್ತವೆ' (ಅಷ್ಟಾವ. ೭೯). ಪಾಪಪರಿಹಾರಕವೆನಿಸಿರುವ ಈ ರುದ್ರಾಕ್ಷಿಗಳನ್ನು ಮೈಮೇಲೆ ಧರಿಸಲು ಮತ್ತು ಜಪದ ಮಣಿಯಾಗಿ ಬಳಸಲು ಉಪಯೋಗಿಸುತ್ತಾರೆ. ವೈಷ್ಣವರಿಗೆ ತುಳಸಿ ಇದ್ದಂತೆ ವೀರಶೈವರಿಗೆ ರುದ್ರಾಕ್ಷಿ. 'ರುದ್ರಾಕ್ಷಿಯೆಂದರೆ ಉರಿಗಣ್ಣು. ಪಾಪ, ಅಜ್ಞಾನಗಳನ್ನು ಸುಟ್ಟುಬಿಟ್ಟಿದ್ದರ ಕುರುಹು ಅದು. ಆಸುರೀಗುಣಗಳನ್ನು ಛೇದಿಸಿದ್ದೇವೆಂಬುದರ ದ್ಯೋತಕ ರುದ್ರಾಕ್ಷಿ' (ವೈರಾಗ್ಯ. ೨೭೨) ಎಂಬ ವಿವರಣೆಯೂ ಇದೆ. ಇವು 'ಶಿವಾನುಭವದ ನೆಲೆಯನ್ನು ಗೊತ್ತುಮಾಡಿಕೊಡುವ ತತ್ತ್ವಚಿಂತಾಮಣಿಗಳು' (ಅಷ್ಟಾವಿ. ೬೧) ಎಂಬ ಮಾತಂತೂ ಸತ್ಯ.

ಕೋಟಿ ಗೋವುಗಳನ್ನು ದಾನಮಾಡಿದ ಪುಣ್ಯ ರುದ್ರಾಕ್ಷಿ ಧರಿಸಿದರೆ ಸಮನಿಸುವುದೆಂದು ಸಿದ್ಧಾಂತಶಿಖಾಮಣಿ (೭-೬೨) ಹೇಳಿದರೆ, ಬಸವಣ್ಣನವರು 'ಅಯ್ಯಾ, ಎನಗೆ ರುದ್ರಾಕ್ಷಿಯೇ ಸರ್ವಪಾವನ, ಅಯ್ಯಾ ಎನಗೆ ರುದ್ರಾಕ್ಷಿಯೇ ಸರ್ವಸಿದ್ಧಿ... ಎನ್ನ ಮುಕ್ತಿಪಥಕ್ಕೆ ಈ ರುದ್ರಾಕ್ಷಿಯೇ ಸಾಧನವಯ್ಯ' (ಬಸವ. ೯೫೯) ಎಂದು ಹೇಳಿ, 'ಶ್ರೀವಿಭೂತಿ ರುದ್ರಾಕ್ಷಿಯಿದ್ದವರ ಭಕ್ತರೆಂಬ ಇಲ್ಲದವರ ಭವಿಯೆಂಬೆ' (ಬಸವ. ೪೩೧) ಎಂದಿದ್ದಾರೆ. ಸಿದ್ಧರಾಮೇಶ್ವರರು ತಮ್ಮ ಅಷ್ಟಾವರಣ ತ್ರಿವಿಧಿಯಲ್ಲಿ ರುದ್ರಾಕ್ಷಿಯನ್ನು ಕುರಿತು ಹೀಗೆಂದಿದ್ದಾರೆ :

*ರುದ್ರಾಕ್ಷಿಯನಾವಾಗಲು ರುದ್ರಮುಖವೆಂದರಿದು*
*ರುದ್ರನ ನೆನಹಿಂದ ಧರಿಸಿದಾತ ರುದ್ರಪದವಿಯ ಪಡೆದು*
*ರುದ್ರ, ಜ್ಞಾನದಿಂ ರುದ್ರ, ತಾನಪ್ಪನೈ ಯೋಗಿನಾಥ*

(ಅಷ್ಟಾತ್ರಿ, ೧೨೯)

'ತತ್ತ್ವಚಿಂತಾಮಣಿಗಳೆಂಬ ರುದ್ರಾಕ್ಷಿಗಳನ್ನು ಭಕ್ತಿದಾರದಲ್ಲಿ ಸಂಗೊಳಿಸಿ ಯುಕ್ತಿವಿಧಾನವರಿದು ಧರಿಸಿ ಸದ್ಯೋನ್ಮುಕ್ತನಾದೆನಯ್ಯ' (ಸಿದ್ಧೇಶ್ವ, ೧೯೪) ಎಂದಿದ್ದಾರೆ ತೋಂಟದ ಸಿದ್ಧಲಿಂಗೇಶ್ವರರು. ಸರ್ವಜ್ಞನು 'ರುದ್ರಾಕ್ಷಿಮಾಲೆಯನು ಭದ್ರದಲಿ ಧರಿಸಿದವಗೆ। ಹೊದ್ದಿರ್ಪ ಪಾಪ ಹೋಗಲವ ಸಾಕ್ಷಾತ್ ರುದ್ರನೇ ಆಕ್ಕು' (ಸರ್ವಜ್ಞ, ೨೫೯) ಎಂದಿದ್ದರೆ, ಷಣ್ಮುಖಸ್ವಾಮಿಗಳು 'ಅನಂತ ಕೋಟಿಯಜ್ಞಂಗಳ ಮಾಡಿ ತೊಳಲಿ ಬಳಲಲದೇಕೋ. ಆ ಯಜ್ಞಂಗಳ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ ದೊರೆಕೊಂಬುದು ನೋಡಾ' (ಅಖಂಡೇ. ೪೪-೧) ಎಂದಿದ್ದಾರೆ. ಕೊನೆಯದಾಗಿ ಲಕ್ಕಣದಂಡೇಶನು ರುದ್ರಾಕ್ಷಿಯ ಮಹತ್ವವನ್ನು ಕುರಿತು ಹೇಳಿರುವುದನ್ನು ಕೇಳೋಣ :

*ಹೆಸರುಗೊಳೆ ನಿಷ್ಪಾಪ ಕಂಡಡಂ ದುರಿತಹರ*
*ಒಸೆದು ಮುಟ್ಟಿದಡೆ ನರಜನ್ಮಮಂ ಕೆಡೆಯೊದೆವ*
*ಭಸಿತಸಹಿತಂ ಧರಿಸೆ ರುದ್ರಾಕ್ಷಿಯಂ ಮಹಾತೇಜವಹ ಸುರಪದವಿ*
*ಪಶುಪತಿಯ ಹೃತ್ಕಮಲಕರ್ಣಿಕಾಪೀಠದೊಳು*
*ಬೆಸುಗೆ ಬಿಡದಿರ್ಪ ನಿತ್ಯ ಧರಿಸಿದಾನುಂ*
*ಪಶುಮತಿಯೊಳಿದನರಿದು ನಡೆವ ಮಾಹೇಶ್ವರರ ಚರಣಾಂಬುಜಕ್ಕೆ ಶರಣು*

(ಶಿವಚಿಂ. ೪೨-೨೧)

## ಮಂತ್ರ

*ಪ್ರಣವೇನೈವ ಮಂತ್ರೇಣ ಬೋಧ್ಯತೇ ನಿಷ್ಕಲಂ ಶಿವಃ ।*
*ಪಂಚಾಕ್ಷರೇಣ ಮಂತ್ರೇಣ ಪಂಚಬ್ರಹ್ಮತನುಸ್ತಥಾ ॥*

(ಸಿದ್ಧಾಂತ. ೮-೨೧)

*ಪಂಚಾಕ್ಷರಿಯೆಂದಡೆ ಪರತತ್ತ್ವವು ನೋಡಾ...*
*ಪಂಚಾಕ್ಷರಿಯೆಂದಡೆ ಸಾಕ್ಷಾತ್ ಪರಶಿವನು ತಾನೆ ನೋಡಾ*
*ಇಂತಪ್ಪ ಪಂಚಾಕ್ಷರಿಮಂತ್ರವ ಹಗಲಿರುಳೆನ್ನದೆ ಸದಾಸನ್ನಿಹಿತನಾಗಿ*
*ಜಪಿಸಿದಾತನು ಅನಂತಪಾತಕಂಗಳ ಮೀರಿ*
*ಪರಮಪದವನೈದುತಿಪ್ಪನು ನೋಡಾ*

(ಅಖಂಡೇ. ೪೯-೧)

ಇದು ಹರಿದಾಡುವ ಮನಸ್ಸನ್ನು ಲಿಂಗದಲ್ಲಿ ನೆಟ್ಟನೆ ನಿಲ್ಲಿಸುವ ದಿವ್ಯಸಾಧನ. 'ಓಂ ನಮಃ ಶಿವಾಯ' ಎಂಬ ಆರು ಅಕ್ಷರಗಳಿಂದ ಕೂಡಿದ ಶಬ್ದ. ಈ ಮಂತ್ರವು ಪಾಪಪರಿಹಾರಕ ಹಾಗೂ ಮುಕ್ತಿದಾಯಕ. ಇದಕ್ಕೆ 'ಶಿವನಿಗೋಸ್ಕರ ನಮಸ್ಕಾರ', 'ಸಕಲ ನಿಷ್ಕಲ ಲಿಂಗಕ್ಕೆ ನಮಸ್ಕಾರ' ಎಂಬ ಸಾಮಾನ್ಯಾರ್ಥದ ಜೊತೆಗೆ ಲಿಂಗಾಂಗಸಂಯೋಗಾರ್ಥವೂ ಇದೆ. ಅಲ್ಲದೆ 'ಓಂ=ಅಖಿಲ ಜಗತ್ತು, ನ ಮಮ=ನನ್ನದಲ್ಲ, ಶಿವಾಯ= ಶಿವನಿಗೋಸ್ಕರ' – ಎಂಬ ಅರ್ಥವನ್ನೂ ಶಿವಾನುಭವಿಗಳು ಹೇಳಿದ್ದಾರೆ. 'ಆಲದ ಬೀಜದಲ್ಲಿ ಮಹಾಮರ ಅಡಗಿರುವಂತೆ ಷಡಕ್ಷರಸೂಕ್ಷ್ಮ ಮಂತ್ರದಲ್ಲಿ ಎಲ್ಲ ವೇದಗಳು, ಎಲ್ಲ ಆಗಮಗಳು, ಉಪನಿಷತ್ತುಗಳು, ಇತಿಹಾಸ ಪುರಾಣಗಳು ಮತ್ತು ಎಲ್ಲ ಅಖಂಡ ವಿಶ್ವವೂ ಅಡಕವಾಗಿವೆ. ಷಡಕ್ಷರ ಮಂತ್ರ ಅಣುವಿಗೆ ಅಣು, ಮಹತ್ತಿಗೆ ಮಹತ್ತು. ಆಕಾರದಲ್ಲಿ ಕಿರಿದು, ಅಂತರಾರ್ಥದಲ್ಲಿ ಅತ್ಯಂತ ಹಿರಿದು' (ಅಷ್ಟಾವ. ೮೮). ವೀರಶೈವನಿಗೆ ಅಂಗದ ಮೇಲೆ ಸದಾ ಲಿಂಗಸಂಬಂಧವಿರುವಂತೆ ಮನದಲ್ಲಿ ಸದಾ ಮಂತ್ರಸಂಬಂಧವಿರಬೇಕು.

ಮಂತ್ರಜಪಗಳಲ್ಲಿ ವಾಚಕ, ಉಪಾಂಶು, ಮಾನಸಿಕ ಎಂಬ ಮೂರು ಬಗೆಗಳಿದ್ದು ಅವುಗಳಲ್ಲಿ ಮಾನಸಿಕ ಜಪವೇ ಮಿಗಿಲಾದದ್ದು. ಮಂತ್ರಸಿದ್ಧಿಯನ್ನು ಪಡೆದವನ ಮಾತೇ ಮಂತ್ರವಾಗಿ ಪರಿಣಮಿಸುತ್ತದೆ.

ಮಂತ್ರಮಹಿಮೆಯನ್ನು ಅರಿತು ಬಾಳಿನಲ್ಲಿ ಅಳವಡಿಸಿ ಶರಣರು ಅದರ ಮಹತ್ತನ್ನು ಕುರಿತು ಮನವಾರೆ ಹೇಳಿದ್ದಾರೆ: 'ನಮಃ ಶಿವಾಯ ಎಂದಡೆ ಕೋಟಿ ಕೋಟಿ ನರಕಂಗಳನೀಡಾಡಿ ಮಹಾದೇವಿಯರ ಮಂದಿರದ ಕೋಟೆಯನೇರಿಸಿತ್ತು ನೋಡು' (ಸಿದ್ಧ ವ. ೨೫೦); 'ದುರಿತವ ಪರಿಹರಿಸಬಲ್ಲಡೆ ಓಂ ನಮಃ ಶಿವಾಯ ಶರಣೆಂಬುದೇ ಮಂತ್ರ' (ಮಹಾದೇ. ೨೧೮).

*ಆವನೊಬ್ಬನ ಹೃದಯ ಓಂ ನಮಃ ಶಿವಾಯ ಎಂಬ ಮಂತ್ರವು*
*ನಿಶ್ಚಲವಾಗಿರಲು ಆತಂಗೆ*
*ಸಕಲಶಾಸ್ತ್ರಗಳ ಸಕಲತಂತ್ರಂಗಳ ಹಂಗಿಲ್ಲ, ಆತಂಗೆ ಸಕಲಶಾಸ್ತ್ರಗಳ*
*ಸಕಲ ವಿದ್ಯಂಗಳ*
*ಅಭ್ಯಸಿಸಬೇಕೆಂಬ ಭ್ರಾಮಕವಿಲ್ಲ. ಆತನಿರ್ದಲ್ಲಿ ಸಕಲಭುವನ*
*ಸಕಲತತ್ತ್ವಂಗಳಿರ್ಪವು*
*ಆತ ನಿರಾವರಣ ನಿರಾಲಯ ನಿಜಮುಕ್ತನು ನೋಡಾ*

(ಅಖಂಡೇ. ೪೯-೧)

ಕೇಶಿರಾಜನು 'ಷಡಕ್ಷರಮಂತ್ರಮಹಿಮೆ' ಎಂಬ ಗ್ರಂಥವನ್ನೇ ರಚಿಸಿ ಅದರ ಹಿರಿಮೆ-ಗರಿಮೆಗಳನ್ನು ಮನದಟ್ಟು ಮಾಡಿದ್ದಾನೆ. ಅದು ಪುಣ್ಯಕ್ಷೇತ್ರದ ಬೀಜವೆಂದೂ, ಪುಣ್ಯಮಹಾನದಿಗಳ ಇರವು ಎಂದೂ, ಪುಣ್ಯದ ಬೆಳಸೆಂದೂ, ವರ್ಣನೆಗೆ ನಿಲುಕದ ಶ್ರೇಷ್ಠಮಂತ್ರವೆಂದೂ ಹೇಳಿ.

*ಶ್ರೀಯಂ ಪಡೆವೊಡೆ ಶಾಶ್ವತ-*
*ದಾಯುಷ್ಯದಪೇಕ್ಷೆ ತನಗೆ ಕೈಗೂಡುವೊಡಾ ।*
*ಮಾಯೆಯೊಳಗಾಗದಿರ್ಪೊಡೆ*
*ಜೇಯನೆ ಜಪಮೋಂ ನಮಃ ಶಿವಾಯೆಂಬ ಪದಂ*

(ಷಮಂತ್ರ. ೧)

ಎಂದು ಸಾರಿದ್ದಾನೆ. ಸರ್ವಜ್ಞ ಈ ಅರಕ್ಕರದ ಮಹಿಮೆಯನ್ನು ಹೀಗೆ ಹೇಳಿದ್ದಾನೆ :

*ಭಕ್ತಿಗೆರಡಕ್ಕರವು ಮುಕ್ತಿಗೆರಡಕ್ಕರವು*
*ಭಕ್ತಿಯಿಂ ಮುಕ್ತಿ ಪಡೆಯುವರೆ ಬಿಡದೆ ಆ-*
*ರಕ್ಕರವ ಹೇಳು*

(ಸರ್ವಜ್ಞ. ೨೫೩)

ಅಂತೆಲೇ ಮಂತ್ರವು 'ಕಾಮಧೇನು, ಚಿಂತಾಮಣಿ, ಪರುಷದಮಣಿ, ಪ್ರಾಣಮೂಲಿಕೆ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ.





## ಪಾದೋದಕ

*ಕರುಣಜಲವೇ ಗುರುಪಾದೋದಕ, ವಿನಯಜಲವೇ ಲಿಂಗಪಾದೋದಕ,*
*ಸಮತಾಜಲವೇ ಜಂಗಮ ಪಾದೋದಕ.*
*ಗುರುಪಾದೋದಕದಿಂದ ಸಂಚಿತಕರ್ಮ ನಾಸ್ತಿ*
*ಲಿಂಗಪಾದೋದಕದಿಂದ ಪ್ರಾರಬ್ಧಕರ್ಮ ನಾಸ್ತಿ*
*ಜಂಗಮಪಾದೋದಕದಿಂದ ಆಗಮಕರ್ಮ ನಾಸ್ತಿ*
*ತ್ರಿವಿಧೋದಕದಲ್ಲಿ ತ್ರಿವಧಕರ್ಮ ನಾಸ್ತಿ*

(ಚೆನ್ನವ. ೧೬೬)

ಪಾದೋದಕ ಮತ್ತು ಪ್ರಸಾದಗಳು ಪೂಜಾಫಲಗಳು. ಪಾದೋದಕವೆಂದರೆ ಪಾದದ ತೀರ್ಥವೆಂದರ್ಥ. ಶ್ರೀಗುರು ಜಂಗಮರ ಪಾದಗಳು ಪವಿತ್ರವಾದವು. ಅವರ ಪಾದಗಳನ್ನು ತೊಳೆದ ಜಲ ಎಲ್ಲ ತೀರ್ಥಗಳಿಗೂ ಶ್ರೇಷ್ಠವಾದದ್ದು. ಪೂಜಿಸುವವನ ಮತ್ತು ಪೂಜೆಗೊಳ್ಳುವವನ ಸಾಮರಸ್ಯದ ಫಲವಾಗಿ ಈ ಅನುಪಮಸಿದ್ಧಿಗಳು – ಪಾದೋದಕ ಹಾಗೂ ಪ್ರಸಾದಗಳು ಲಭಿಸುವುವು. ಪಾದೋದಕವನ್ನು ಶಿವನ ಚಿದ್ರಸವೆನ್ನುವರು. ಇದನ್ನು ಇಬ್ಬರೂ ಸೇವಿಸುವರು. ಗುರುವಿನ ಹಸ್ತ ಶಿಷ್ಯನ ಮಸ್ತಕ ಇವೆರಡರ ಸಂಯೋಗದಿಂದ ಶಿಷ್ಯನಲ್ಲಿರುವ ಶಿವಕಳೆಯು ಇಷ್ಟಲಿಂಗದಲ್ಲಿ ಮೂಡುವಂತೆ, ಗುರು ಅಥವಾ ಜಂಗಮನ ಪಾದ ಮತ್ತು ಶಿಷ್ಯನ ಅಥವಾ ಭಕ್ತನ ಹಸ್ತ – ಇವುಗಳ ಸಂಯೋಗದಿಂದ ಗುರು ಅಥವಾ ಜಂಗಮನಲ್ಲಿರುವ ಜ್ಞಾನಾಮೃತವು ಪಾದೋದಕರೂಪದಲ್ಲಿ ಬರುವುದು.

'ಪಾದೋದಕದಲ್ಲಿ ಗುರುಪಾದೋದಕ, ಲಿಂಗಪಾದೋದಕ ಮತ್ತು ಜಂಗಮಪಾದೋದಕವೆಂದು ಮೂರು ವಿಧ. ಇವು ಮೂರು ಪ್ರಕಾರಗಳಿದ್ದರೂ ಪ್ರತಿಯೊಂದರಲ್ಲಿಯೂ ಉಳಿದ ಎರಡೂ ಕೂಡಿಯೇ ಇರುವುವು ... ಪಾದೋದಕಕ್ರಿಯೆಯನ್ನು ನಡೆಸುವಾಗ ಭಕ್ತನು ಮಂತ್ರಪೂರ್ವಕವಾಗಿ ಕ್ರಿಯಾಮೂರ್ತಿಯ ಬಲದಂಗುಷ್ಟದಲ್ಲಿ ಎರೆದ ಉದಕವೇ ಗುರುಪಾದೋದಕ, ಎಡದಂಗುಷ್ಠದಲ್ಲಿ ಎರೆದುದಕವೇ ಲಿಂಗಪಾದೋದಕ, ಎರಡೂ ಅಂಗುಷ್ಠಗಳ ಮಧ್ಯದಲ್ಲಿ ಎರೆದುದಕವೇ ಜಂಗಮಪಾದೋದಕವೆಂದು ಭಾವಿಸಲಾಗುವುದು' (ಅಷ್ಟಾವಿ. ೪೫).

ಪಾದೋದಕವನ್ನು ಸಿದ್ಧಪಡಿಸುವ ಹಾಗೂ ಸೇವಿಸುವ ಕ್ರಮವು ಶಾಸ್ತ್ರಬದ್ಧವಾದ ಕಟ್ಟುನಿಟ್ಟಿನ ಕಾರ್ಯಕ್ರಮ. ಅದನ್ನು ಅರಿತು ಆಚರಿಸಿದರೆ ಗುರುಲಿಂಗಜಂಗಮಸೇವೆಯ ಪೂರ್ಣಸಿದ್ಧಿಯುಂಟಾಗುತ್ತದೆ. ಇದನ್ನೇ ಬಸವಲಿಂಗ ಶರಣರು ಹೀಗೆಂದು ವಿವರಿಸಿದ್ದಾರೆ :

*ಮಂತ್ರಮಯ ಚರಲಿಂಗದಡಿಗೆ ಭಕ್ತನು ಕರವ*
*ಸಂತಸದೊಳಿಟ್ಟು ಪತಿಭಕ್ತಿಯಿಂದುಪಚರಿಸಿ*
*ಮುಂತೆ ಪರಬ್ರಹ್ಮರಂಧ್ರದೊಳಿರ್ದ ಸತ್ತೋದಕವ ಚರಣದಿಂದೆ ಪಡೆದು ।*
*ಇಂತೊಗೆದ ಸುಜ್ಞಾನತೀರ್ಥಪುತ್ರನ ಶರಣ-*
*ಸಂತತಿಗಳಾಲಿಂಗಿಸುತ್ತೆತ್ತಿ ಮುದ್ದಾಡಿ*
*ಸಂತೈಸುತಾ ಪಾದತೀರ್ಥದಾಚರಣೆಯೊಳಗಿರ್ಪ ಸದ್ಭಕ್ತನಧಿಕಂ*

(ಮೈಲಾರ. ೧-೧೦)

ಈ ಪವಿತ್ರಪುಣ್ಯೋದಕದ ಸೇವನೆಯಿಂದ ಆಗುವ ಲಾಭ ಸಣ್ಣದಲ್ಲ. ಜಗತ್ತಿನ ಅನೇಕ ಪುಣ್ಯನದಿಗಳ ಸ್ನಾನ ಸಪ್ತ ಸಾಗರಗಳ ಜಳಕದ ಫಲ, 'ಅಷ್ಟಷಷ್ಟಿ ಕೋಟಿ ತೀರ್ಥಯಾತ್ರೆಯ ಫಲವು, ಗುರುಲಿಂಗಜಂಗಮದ ಶ್ರೀ ಚರಣದಂಗುಷ್ಠದಿಂದೊಗೆವ ಜಲಬಿಂದು ಸಾಸಿರಭಾಗದಷ್ಟಕ್ಕೆ ಎಣೆಯಾಗದು. 'ಅದಕ್ಕೇ ಬಸವಣ್ಣನವರು 'ಪಾದೋದಕ ಪ್ರಸಾದದಿಂದ ಭವಗೆಟ್ಟನು' (ಬಸವ. ೭೭೯) ಎಂದಿರುವುದು. ಚೆನ್ನಬಸವಣ್ಣನವರಂತೂ ಪಾದೋದಕ ಕ್ರಿಯೆ ಹಾಗೂ ಅದರ ಮಹತ್ವವನ್ನು ಕುರಿತು ಹತ್ತಾರು ವಚನಗಳಲ್ಲಿ ಶಾಸ್ತ್ರೀಯವಾಗಿ ನಿರೂಪಿಸಿದ್ದಾರೆ.

## ಪ್ರಸಾದ

*ಪ್ರಸಾದವೇ ಪರಮಜ್ಞಾನ, ಪ್ರಸಾದವೇ ಪರಾಪರ*
*ಪ್ರಸಾದವೇ ಪರಬ್ರಹ್ಮ, ಪ್ರಸಾದವೇ ಪರಮಾನಂದ*
*ಪ್ರಸಾದವೇ ಗುರು, ಪ್ರಸಾದವೇ ಲಿಂಗ,*
*ಪ್ರಸಾದವೇ ಜಂಗಮ, ಪ್ರಸಾದವೇ ಪರಿಪೂರ್ಣ,*
*ಸೌರಾಷ್ಟ್ರ ಸೋಮೇಶ್ವರಲಿಂಗದ ಪ್ರಸನ್ನತೆಯೇ ಪ್ರಸಾದ,*
*ಇಂತಪ್ಪ ಪ್ರಸಾದವುಳ್ಳ ಮಹಾತ್ಮಂಗೆ ಆನು ನಮೋ ನಮೋ ಎನುತಿರ್ದೆನು*

(ಆದವ. ೧೯೬)

ವೀರಶೈವರಲ್ಲಿ ಅಷ್ಟಾವರಣ, ಪಂಚಾಚಾರ ಹಾಗೂ ಷಟ್‌ಸ್ಥಲಗಳ ತತ್ತ್ವವನ್ನು ತಿಳಿದು ಆಚರಿಸಿ ಪಡೆಯುವ ಫಲವೇ ಪ್ರಸಾದ, ಪ್ರಸಾದಕ್ಕೆ ಅನುಗ್ರಹವೆಂದರ್ಥ, ಪ್ರಸಾದವೆಂದರೆ ಶಿವನ ಪ್ರಸನ್ನತೆ, ಗುರುಲಿಂಗಜಂಗಮರಿಗೆ ಅರ್ಪಿತವಾಗಿ ಬಂದುದು. ಭಕ್ತನು ತನ್ನ ಆಹಾರವನ್ನು ತನ್ನದು ಎಂದು ಭಾವಿಸದೆ ಭಗವಂತನದೆಂದು ಭಾವಿಸಿ ಗುರುಲಿಂಗಜಂಗಮರಿಗೆ ಅರ್ಪಿಸಿ, ಅನಂತರ ದಾಸೋಹಂಭಾವದಿಂದ ಉಪಭೋಗಿಸುವ ಆಹಾರವು ಪ್ರಸಾದವೆನಿಸುತ್ತದೆ. ಅದನ್ನೇ ಆದಯ್ಯ 'ಅನ್ನವೇ ಪ್ರಸಾದವಲ್ಲ, ಜಂಗಮಮುಖದಿಂದ ತೋರಿತ್ತು ಪ್ರಸಾದ' (ಆದವ. ೧೯೭) ಎಂದಿದ್ದಾರೆ. ದೇಹಕ್ಕೆ ಬರುವ ರೋಗವನ್ನು ಔಷಧಿ ಕಳೆದಂತೆ ಭವರೋಗವನ್ನು ಪ್ರಸಾದವು ನೀಗುತ್ತದೆ.

'ಪ್ರಸಾದ'ಕ್ಕೆ ಇನ್ನೊಂದು ವಿಶೇಷಾರ್ಥವಿದೆ. 'ಶಿವನೂ ಸೇರಿದಂತೆ ಜಗತ್ತೆಲ್ಲವೂ ಪ್ರಸಾದರೂಪ. ಜೀವ ಶಿವನಾಗಲು ಅವನಂತೆ ಪ್ರಸಾದರೂಪವಾಗಬೇಕು. ದೀಕ್ಷೆಯಿಂದ ಶುದ್ಧನಾಗಿ ಭೋಗಸಾಧನವಾದ ದೇಹ, ಲೋಕದ ಭೋಗವಸ್ತುಗಳು – ಇವೆಲ್ಲವನ್ನೂ ಜಂಗಮಕ್ಕರ್ಪಿಸಿ, ಅನಂತರ ಪ್ರಸಾದವಾಗಿ ಸೇವಿಸಿದರೆ ತಾನೂ ಪ್ರಸಾದರೂಪವಾಗುವನು' (ಅಷ್ಟಾವಿ. ೪೮). ಹೀಗಾಗಿ ಪ್ರಸಾದಕ್ಕೆ ಎರಡು ಅರ್ಥಗಳಿರುವುದು ಸ್ಪಷ್ಟವಾಗುತ್ತದೆ. ಒಂದು ಬಾಹ್ಯಾರ್ಥ: ಶಿವನಿಗೆ ಅರ್ಪಿತವಾಗಿ ಉಳಿದ ಪದಾರ್ಥ. ಇನ್ನೊಂದು ಅಂತರಾರ್ಥ: ಮನಸ್ಸಿನ ಪ್ರಸನ್ನತೆ, ಶಿವನ ಅನುಗ್ರಹ ಎಂಬುದು. ಬಾಹ್ಯಪ್ರಸಾದದಿಂದ ಮನಸ್ಸಿಗೆ ಪ್ರಸನ್ನತೆಯುಂಟಾಗುತ್ತದೆ. ಮನಸ್ಸಿನ ಪ್ರಸನ್ನತೆಯು ಶಿವನ ಅನುಗ್ರಹಕ್ಕೆ ಕಾರಣವಾಗುತ್ತದೆ (ಪ್ರಸಾದ. ೩೭೫).

ಅದಕ್ಕೇ ವೀರಶೈವನು ಬಾಹ್ಯವಸ್ತುಗಳನ್ನು ಕೇವಲ ಪದಾರ್ಥಗಳಾಗಿ ಸ್ವೀಕರಿಸದೆ, ಗುರುಲಿಂಗಜಂಗಮರಿಗೆ ಅರ್ಪಿಸುವುದರ ಮೂಲಕ ಪ್ರಸಾದವನ್ನಾಗಿ ಪರಿವರ್ತಿಸಿ ಸ್ವೀಕರಿಸುತ್ತಾನೆ. ಹೀಗೆ ಕ್ರಮೇಣ ಭಕ್ತನ ನಡೆ-ನುಡಿಗಳೆಲ್ಲವೂ ಪ್ರಸಾದರೂಪವಾಗಿ, ಎಲ್ಲ ಕ್ರಿಯೆಗಳಲ್ಲಿಯೂ ಶಿವನ ಪ್ರಸಾದವನ್ನೇ ಕಾಣುವ ದೈವಿಕದೃಷ್ಟಿ ಪ್ರಾಪ್ತವಾಗುತ್ತದೆ.

ಪ್ರಸಾದಗಳಲ್ಲಿ ಮೂರು ವಿಧ – ಶುದ್ಧ, ಸಿದ್ಧ, ಪ್ರಸಿದ್ಧ ಎಂದು. ಗುರುವಿನಿಂದ ಬಂದುದು ಶುದ್ಧಪ್ರಸಾದ, ಇದರಿಂದ ತನುಶುದ್ಧಿ; ಲಿಂಗದಿಂದ ಬಂದುದು ಸಿದ್ಧಪ್ರಸಾದ, ಇದರಿಂದ ಮನಶುದ್ಧಿ; ಜಂಗಮದಿಂದ ಬಂದುದು ಪ್ರಸಿದ್ಧ ಪ್ರಸಾದ, ಇದರಿಂದ ಭಾವಶುದ್ಧಿ. ರೂಪು, ರುಚಿ, ತೃಪ್ತಿ ಎಂಬ ಪದಾರ್ಥಗಳ ಗುಣಗಳನ್ನು ಅನುಸರಿಸಿ ಇದನ್ನು ಇನ್ನೊಂದು ಬಗೆಯಾಗಿಯೂ ಹೇಳುವರು. 'ಎಲ್ಲ ಪದಾರ್ಥಗಳ ರೂಪಗಳನ್ನು ಇಷ್ಟಲಿಂಗಕ್ಕೆ ಅರ್ಪಿಸಿದರೆ ಅದು ಶುದ್ಧ ಪ್ರಸಾದ; ರುಚಿಗಳನ್ನು ಪ್ರಾಣಲಿಂಗಕ್ಕೆ ಅರ್ಪಿಸಿದರೆ ಅದು ಸಿದ್ಧಪ್ರಸಾದ; ತೃಪ್ತಿಯನ್ನು ಭಾವಲಿಂಗಕ್ಕೆ ಅರ್ಪಿಸಿದರೆ ಪ್ರಸಿದ್ಧ ಪ್ರಸಾದವೆನಿಸುವುದು' (ಅಷ್ಟಾವ. ೧೦೮). ಇದನ್ನೇ ಚೆನ್ನಬಸವಣ್ಣನವರು 'ಶುದ್ಧವೆಂದಡೆ ಗುರುಮುಖದಿಂದ ಮಲತ್ರಯವ ಕಳೆದುಳಿದ ಶೇಷ, ಸಿದ್ಧವೆಂದಡೆ ಲಿಂಗದಿಂದ ಕರಣಮಥನಂಗಳ ಕಳೆದುಳಿದ ಶೇಷ, ಪ್ರಸಿದ್ಧವೆಂದಡೆ ಜಂಗಮಮುಖದಿಂದ ಸರ್ವಚೈತನ್ಯಾತ್ಮಕ ತಾನೆಯಾಗಿ ಖಂಡಿತವಳಿದುಳಿದ ಶೇಷ' (ಚೆನ್ನವ. ೧೧೧) ಎಂದಿದ್ದಾರೆ.

ವೀರಶೈವರಲ್ಲಿ ಪ್ರಸಾದ ಸ್ವೀಕರಿಸುವ ಕ್ರಮದಲ್ಲಿ ಕೆಲವು ನಿರ್ದಿಷ್ಟ ನಿಯಮಗಳಿವೆ. ಉಂಡು ಉಳಿಸದೆ ಇರುವುದು, ಹೆಚ್ಚು ತಿನ್ನದೆ ಇರುವುದು, ಚೆಲ್ಲದೆ ಊಟ ಮಾಡುವುದು, ದ್ರವಗುಂದದಂತೆ ಉಣ್ಣುವುದು, ಪ್ರಸಾದಸೇವನೆಯ ಕಾಲದಲ್ಲಿ ಲಿಂಗ ನಿರೀಕ್ಷಣೆ, ಮಂತ್ರಧ್ಯಾನ, ಸಾವಧಾನಚಿತ್ತವಿರಬೇಕು ಎಂಬುದು; ಪ್ರಸಾದ ಸೇವಿಸಲು ನಿರ್ದಿಷ್ಟ ಸ್ಥಳಕಾಲಗಳು ಬೇಕು ಎಂಬುದು ಇತ್ಯಾದಿ.

'ಅರಸರ ಮನೆಯ ಅರಸಿಯಾಗಿಪ್ಪುದಕ್ಕಿಂತ ಭಕ್ತರ ಮನೆಯಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯ' ಎನ್ನುತ್ತಾರೆ ಬಸವಣ್ಣನವರು. ಏಕೆಂದರೆ ಅಲ್ಲಿ 'ಲಿಂಗಕ್ಕೆ ಬೋನವಿಡುವ, ಒಕ್ಕುದನುಣ್ಣುವ' ಸೌಭಾಗ್ಯವಿರುತ್ತದೆ. ಅದಕ್ಕೇ ಅವರು 'ಪ್ರಸಾದಕ್ಕಲ್ಲದೆ ಮಾಡೆನೀ ತನುವನು. ಲಿಂಗಜಂಗಮದ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನೆಂಬುದೆನ್ನಯ್ಯ ಭಾಷೆ' (ಬಸವ. ೭೨೭) ಎಂದಿರುವುದು. ಇದಕ್ಕೆ 'ಗುರುಜಂಗಮಪಾದೋದಕ ಪ್ರಸಾದವ ಭಕ್ತಿಯಿಂದ ಪಡೆದು ನಿಚ್ಚನಿಚ್ಚ ಸೇವಿಸಬಲ್ಲಡೆ, ಆ ಭಕ್ತನ ಕಾಯಕರಣಾದಿಗಳ ಸೋಂಕಲಮ್ಮದೆ ದುರಿತವು ದೂರಾಗಿಪ್ಪುದು' (ಚೆನ್ನವ. ೧೬೭) ಎಂದು ಚೆನ್ನಬಸವಣ್ಣನವರೂ ದನಿಗೂಡಿಸಿದ್ದಾರೆ.

★ ★ ★

ಢಕ್ಕೆಯ ಮಾರಯ್ಯನವರು ಕಾಯಕದಂತೆ ಢಕ್ಕೆಯನ್ನು ಬಾರಿಸುತ್ತ ಅಷ್ಟಾವರಣಗಳ ಮಹತ್ವವನ್ನು ನಿದರ್ಶನಪೂರ್ವಕ ಹೇಗೆ ನಿರೂಪಿಸುತ್ತಿದ್ದರೆಂಬುದನ್ನು ಭೈರವೇಶ್ವರಕಾವ್ಯದ ಕಥಾಮಣಿ ಸೂತ್ರರತ್ನಾಕರದಲ್ಲಿ ಹೀಗೆ ನಿರೂಪಿಸಲಾಗಿದೆ. 'ಢಕ್ಕೆಯ ಮಾರಯ್ಯಗಳು ಭಕ್ತರಂಗಳದಲ್ಲಿ ಢಕ್ಕೆಯ ಬಾರಿಸಿ, ಮಾರಿಯಂ ಕುಣಿಸಿ ಉಡಿಯಲ್ಲಿ, ತಲೆಯಲ್ಲಿ ಬೇವಿನಸೊಪ್ಪಂ ಕಟ್ಟಿಕೊಂಡು ಮಾರಿಯಂ ಮುಂದಿಟ್ಟುಕೊಂಡು, ಆಚಾರವಂ ತೋರಿ ಸಾರುತ್ತಿಹರು :

'ಗುರು ಮಹತ್ವದಿಂದ ಗೂಗೆಗೆ ಶ್ವಪಚಗೆ ಮುಕ್ತಿಯಾಯಿತ್ತು; ಲಿಂಗಮಹತ್ವದಿಂದ ಕಾಗೆಗೆ ಕಳ್ಳಗೆ ಮುಕ್ತಿಯಾಯಿತ್ತು; ಜಂಗಮ ಮಹತ್ವದಿಂದ ವ್ಯಾಘ್ರಗೆ ಮತ್ಸ್ಯಗೆ ಮುಕ್ತಿಯಾಯಿತ್ತು; ಪ್ರಸಾದದಿಂದ ಕಪ್ಪೆಗೆ ಇರುವೆಗೆ ಮುಕ್ತಿಯಾಯಿತು; ವಿಭೂತಿಯಿಂದ ಮೂರ್ಖಗೆ ಕುಂಬಾರಂಗೆ ಮುಕ್ತಿಯಾಯಿತ್ತು; ರುದ್ರಾಕ್ಷಿಯಿಂದ ಅಗಸಗೆ ಶೂದ್ರನಿಗೆ ಮುಕ್ತಿಯಾಯಿತ್ತು. ಪಂಚಾಕ್ಷರಿಯಿಂದ ಅನಂತ ಪ್ರಾಣಿಗಳು ಮುಕ್ತಿವಡೆದವು – ಅಷ್ಟಾವರಣ ಬಿಡದೆ ನಂಬಿ'

ಎಂದು ಸಾರುತ್ತ, ಭಕ್ತರ ಮನೆಗೆ ಹೋಗಿ ಕಾಯಕವಂ ತಂದು ಜಂಗಮಕ್ಕೆ ನೀಡುತ್ತಿರಲು .... (ಭೈರಸೂ. ೨೪೪).

ತತ್ತ್ವಗಳು ಎಷ್ಟು ಮಹತ್ವವಿದ್ದರೂ ಆಚರಿಸುವವರು ನಂಬುಗೆಯನ್ನು, ವಿಶ್ವಾಸವನ್ನು ತಳೆಯದಿದ್ದರೆ ಅವು ನಿಷ್ಪ್ರಯೋಜಕ; ನಿರರ್ಥಕ. ನಂಬುಗೆಯೊಂದಿದ್ದರೆ ಶ್ರದ್ಧಾಸಕ್ತಿಗಳು ತಾನಾಗಿಯೇ ಬರುತ್ತವೆ. ಅದಿಲ್ಲದೆ ಸಂಶಯ ತಳೆದರೆ ಕೇಡು ತಪ್ಪದು. ಭಕ್ತಿಯಿಲ್ಲದಿದ್ದರೆ ಗುರು ನರ, ಲಿಂಗ ಶಿಲೆ, ಜಂಗಮ ಜಡಮತಿ, ಪಾದೋದಕ ಜಡನೀರು, ಪ್ರಸಾದ ಕೂಳು, ರುದ್ರಾಕ್ಷಿ ಗಿಡದ ಕಾಯಿ, ಮಂತ್ರ ಬರಿಯ ಶಬ್ದ. 'ಶಂಕಿತಂಗೆ ಪ್ರಸಾದ ಸಿಂಗಿಕಾಳಕೂಟ ವಿಷ' (ಬಸವ. ೭೭೧) ಎಂಬ ಬಸವಣ್ಣನವರ ಎಚ್ಚರಿಕೆಯನ್ನು ನಾವು ನೆನಪು ಮಾಡಿಕೊಳ್ಳಬಹುದು. ಷಣ್ಮುಖಸ್ವಾಮಿಗಳು ಈ ಬಗೆಯ ಪಂಚಮಹಾಪಾತಕಗಳನ್ನು ಹೆಸರಿಸಿದ್ದಾರೆ :

*ಗುರುವಿನಲ್ಲಿ ಗುಣವನರಸಿದಡೆ ಒಂದನೆ ಪಾತಕ*
*ಲಿಂಗದಲ್ಲಿ ಶಿಲೆಯನರಸಿದಡೆ ಎರಡನೆಯ ಪಾತಕ*
*ಜಂಗಮದಲ್ಲಿ ಕುಲವನರಸಿದಡೆ ಮೂರನೆಯ ಪಾತಕ*
*ಪಾದೋದಕದಲ್ಲಿ ಸೂತಕವನರಸಿದಡೆ ನಾಲ್ಕನೆಯ ಪಾತಕ*
*ಪ್ರಸಾದದಲ್ಲಿ ರುಚಿಯನರಸಿದಡೆ ಐದನೆಯ ಪಾತಕ*
*ಇಂತೀ ಪಂಚಮಹಾಪಾತಕರ ಎನಗೊಮ್ಮೆ ತೋರಿದಿರಯ್ಯ*

(ಅಖಂಡೇ. ೭೫-೫೦)

ತತ್ತ್ವದಲ್ಲಿ ವಿಶ್ವಾಸವಿಟ್ಟು ನಿಷ್ಠೆಯಿಂದ ನಡೆಯುವವರಿಗೆ ಅಷ್ಟಾವರಣಗಳು ಲೌಕಿಕ ಹಾಗೂ ಪಾರಮಾರ್ಥಿಕ ಸುಖ ಸಾಧನೆಗೆ ನೆರವಾಗುತ್ತವೆ ಎಂಬ ಮಾತಿನಲ್ಲಿ ಸಂಶಯವಿಲ್ಲ.

❑





# ಅಕ್ಕಮಹಾದೇವಿ ವಚನಗಳಲ್ಲಿ ಸಾಮಾಜಿಕ ಪ್ರಜ್ಞೆ

– ಡಾ. ಟಿ.ಸಿ. ಪೂರ್ಣಿಮಾ
ಮುಖ್ಯಮಂತ್ರಿಯವರ ವಿಶೇಷಾಧಿಕಾರಿ,
ನಂ. 244, 23ನೇ ಬ್ಲಾಕ್, ಸಿ.ಪಿ.ಡಬ್ಲ್ಯುಡಿ ಕಾಲೋನಿ,
ಕೋರಮಂಗಲ 2ನೇ ಬ್ಲಾಕ್, ಬೆಂಗಳೂರು – 560 034.



ಹನ್ನೆರಡನೆ ಶತಮಾನವನ್ನು ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅತೀ ಮುಖ್ಯವಾದ, ವಿಶಿಷ್ಟವಾದ ಕಾಲಘಟ್ಟವೆಂದು ಪರಿಗಣಿಸಲಾಗಿದೆ. ಹಾಗಂದುಕೊಳ್ಳುವುದಕ್ಕೆ ಶರಣ ಸಾಹಿತ್ಯ ನಮಗೊದಗಿಸುವ ಆ ಕಾಲಮಾನದ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಚಿತ್ರಣಗಳು ಕಾರಣ. ಒಂದರ್ಥದಲ್ಲಿ ಬಸವಯುಗ ಸಾಮಾಜಿಕ ಕ್ರಾಂತಿ ನಡೆದ ಸಂದರ್ಭ, ಭಕ್ತಿಪಂಥವೇ ಸೃಷ್ಟಿಗೊಂಡ ಕಾಲ, ಆಧ್ಯಾತ್ಮಿಕ ಚಿಂತನೆಗಳಿಗೆ ಹೊಸ ದಿಕ್ಕಿನ ಬಾಗಿಲು ತೆರೆದ ಸಮಯ ಈ ಮೂರು ವಿಚಾರಗಳು ಪರಸ್ಪರ ಸಂಬಂಧಿತವೂ ಪೂರಕವೂ ಆಗಿದ್ದುವೆನ್ನುವುದು ಗಮನಾರ್ಹ ಅಂಶ.



ಸಾಮಾಜಿಕವಾಗಿ ನೋಡುವುದಾದರೆ, ವೈದಿಕ ಸಂಪ್ರದಾಯದ ಮೇಲಾಟವಿದ್ದ ಹಿನ್ನೆಲೆಯಲ್ಲಿ ಒಡಮೂಡಿದ ಸಾಮಾಜಿಕ ನ್ಯಾಯದ ಪರಿಕಲ್ಪನೆಯ ವೀರಶೈವ ಅಥವಾ ಶಿವತತ್ವ ಚಿಂತನೆಗಳು ನಿಂತದ್ದು ಧಾರ್ಮಿಕ ನೆಲೆಯಲ್ಲಿ. ಈ ಧಾರ್ಮಿಕ ಭಾವನೆಗಳೇ ಶರಣರಲ್ಲಿ ಆಧ್ಯಾತ್ಮಿಕ ಒಳಗಣ್ಣು ತೆರೆಸಿದುವೆಂದು ಹೇಳಬಹುದು. ಇದೆಲ್ಲದರ ಫಲಶ್ರುತಿಯಾಗಿ ಅರಳಿ ಬಂದದ್ದೆಂದರೆ ಸಾಮಾಜಿಕ ಉನ್ನತೀಕರಣದ ಸಿದ್ಧಾಂತ.

ಅಂದಿನ ಸಮಾಜದಲ್ಲಿ ಕಾಣಬರುತ್ತಿದ್ದ ತರತಮ್ಯಗಳನ್ನು, ಅವಕ್ಕೆ ಅದೇ ಸಮಾಜದ ಪ್ರತಿಕ್ರಿಯಾರಾಹಿತ್ಯವನ್ನು ಗುರುತಿಸಿ, ಜನರನ್ನು ಎಚ್ಚರಿಸುವ ಪ್ರಯತ್ನ ನಡೆಸಿದವರು ಶಿವಶರಣರು. ಅದಕ್ಕಾಗಿ ಅವರು ಆಯ್ದುಕೊಂಡ ಅನೇಕ ಮಾರ್ಗಗಳಲ್ಲಿ ಕೆಲವು ನೇರವಾಗಿ ಸಾಮಾಜಿಕ ಮಾರ್ಗದವು, ಕೆಲವು ಧಾರ್ಮಿಕ ಹಾಗೂ ಇನ್ನು ಕೆಲವು ಆಧ್ಯಾತ್ಮಿಕ ಮಾರ್ಗದವಾಗಿದ್ದವು. ಈ ಪರಿಯ ಚಿಂತನೆ-ವಿಚಾರಗಳಿಗೆ, ಕಲ್ಪನೆ-ಕನಸುಗಳಿಗೆ ಮೊದಲು ಕಣ್ಣು ಕೊಟ್ಟವರು ಬಸವಣ್ಣನವರು. ಧಾರ್ಮಿಕ ತಳಹದಿಯ ಮೇಲೆ ಇತ್ತ ಸಾಮಾಜಿಕ, ಅತ್ತ ಆಧ್ಯಾತ್ಮಿಕವಾಗಿ ಬಸವಣ್ಣನವರು ಹಾಕಿಕೊಟ್ಟ ಚಿಂತನಾಲಹರಿಯ ಕಡೆಗೆ ಜನಮಾನಸ ಕೇಂದ್ರೀಕೃತವಾಗ ತೊಡಗಿತು. ವೈದಿಕ ಸಂಪ್ರದಾಯದ ಬಿಗಿ ಚೌಕಟ್ಟುಗಳನ್ನು ಕಿತ್ತೊಗೆದು ಎದ್ದ ಜನ ಅದಕ್ಕೆ ಪ್ರತಿವಾದಿಯಾಗಿ ವೀರಶೈವ ವೇದಿಕೆಯನ್ನು ಸಜ್ಜುಗೊಳಿಸಿ ಕೊಳ್ಳಬೇಕಾದ ಅನಿವಾರ್ಯತೆಯಿತ್ತು. ಈ ರೀತಿ ಜನತೆ ಸಿಡಿದೇಳುವುದಕ್ಕೆ ಒಂದು ಕಾರಣ, ಬಸವಣ್ಣನವರ ಸರ್ವಸಮಾನತೆಯ ಆಲೋಚನೆಯಾದರೆ, ಇನ್ನೊಂದು ಕಾರಣ, ತಾವನುಭವಿಸುತ್ತಿದ್ದ ಕೀಳರಿಮೆಯ ಯಾತನೆಯಿಂದ ಮುಕ್ತಿ ಪಡೆಯಬೇಕೆನ್ನುವ ಜನಾಭಿಪ್ರಾಯ.

ಸಾಮಾಜಿಕವಾಗಿ ಇಂತಹ ಮಹಾ ಪರಿವರ್ತನೆಯಾಗುತ್ತಿದ್ದ ಕಾಲದಲ್ಲೇ ನಮಗೆದುರಾಗುವ ವಿಶಿಷ್ಟ ಮಹಿಳೆ ಅಕ್ಕಮಹಾದೇವಿ. ಅಕ್ಕ ಬಹುತೇಕ ಅಂತರ್ಮುಖಿ, ಸ್ತ್ರೀಪರ ನಿಲುವುಗಳಿದ್ದವಳಾಗಿ ಕಾಣಬರುತ್ತಾಳೆ. ಒಬ್ಬ ಹೆಣ್ಣಾಗಿ ಸಮಾಜ ತನಗೆ ಬಿಗಿದ ಕಟ್ಟುಪಾಡುಗಳು, ತನ್ನ ಮನದಿಚ್ಛೆಗೆ ವಿರುದ್ಧವಾಗಿ ಕೌಟುಂಬಿಕ ವ್ಯವಸ್ಥೆಯ ಪಾಲ್ದಾರಳಾಗಬೇಕೆನ್ನುವ ಸಾಂಪ್ರದಾಯಕತೆಯನ್ನು ಅಕ್ಕ ತೀವ್ರವಾಗಿ ವಿರೋಧಿಸುವುದೇ ಭಾರತೀಯ ಪರಂಪರೆಯಲ್ಲಿ ಹದಿಹರೆಯದ ಹೆಣ್ಣೊಬ್ಬಳು ಸಿಡಿದೇಳುವುದರ ಪ್ರಥಮತೆಯಾಗಿದೆ. ಸಮಾಜದ ಕಟ್ಟುಕಟ್ಟಲೆಗಳನ್ನು ಧಿಕ್ಕರಿಸುವ ಪ್ರಚೋದನೆ ಉಂಟಾಗುವುದಕ್ಕೆ ಅವಳು ತೀವ್ರ ಆಧ್ಯಾತ್ಮಗಾಮಿಯಾಗಿದ್ದಳೆನ್ನುವುದೇ ಮುಖ್ಯ ಕಾರಣವೆಂದು ಭಾವಿಸಬಹುದು. ಅದೇ ರೀತಿ ಆ ಕಾಲದಲ್ಲೇ ಅಕ್ಕ ಆಳವಾಗಿ ನಂಬಿದ್ದ ಸ್ತ್ರೀ ಸಂವೇದಿ ಧೋರಣೆಗಳೂ ಕಾರಣವೆನ್ನಬಹುದು.

ಸ್ತ್ರೀ-ಪುರುಷರ ನಡುವಿನ ಅಸಮಾನತೆಗೆ ಇಂಬುಗೊಡುತ್ತಿದ್ದ ಅನೇಕ ಸಾಮಾಜಿಕ ಸಂಪ್ರದಾಯಗಳನ್ನು, ನಂಬಿಕೆ, ಆಚಾರ ವಿಚಾರಗಳನ್ನು ಖಂಡಿಸಿದ ಶರಣರಲ್ಲಿ ಅಕ್ಕನೂ ಒಬ್ಬಳು. ಮತ್ತು ಪ್ರಮುಖಳು. *'ಒಳಗಿರುವ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ'* ಎನ್ನುವ ಪ್ರಬಲ ತಾತ್ವಿಕ ನೆಲೆಯಲ್ಲೇ ಅಕ್ಕ ತನ್ನ *'ಶರಣ ಸತಿ-ಲಿಂಗಪತಿ'* ತತ್ವವನ್ನು

ಮಂಡಿಸುತ್ತಾಳೆ. ಅವಳ ದೃಷ್ಟಿಯಲ್ಲಿ ಪರಶಿವನೇ ಪುರುಷ, ಪತಿ; ಉಳಿದ ಸಕಲ ಸ್ತ್ರೀ ಪುರುಷರೂ ಹೆಣ್ಣೇ ಅಂದರೆ ಸತಿ. ಅಂದರೆ ಸ್ತ್ರೀ-ಪುರುಷ ರೆಂಬುದು ಕೇವಲ ಬಾಹ್ಯ ತೋರಿಕೆ, ಅಂತರಂಗವೆನ್ನುವುದಕ್ಕೆ ಯಾವ ಸ್ತ್ರೀತ್ವ, ಯಾವ ಪುರುಷತ್ವ ಎಂದವಳು ಪ್ರಶ್ನಿಸುತ್ತಾಳೆ. ಸ್ತ್ರೀ ಪುರುಷರ ನಡುವೆ ಶರಣನೇ ಸತಿ, ಲಿಂಗವೇ ಪತಿ ಎನ್ನುವ ಭಾವ ಮೂಡಿಸುವುದರ ಮೂಲಕ ಸಮಾನತೆಯನ್ನು ಸಾರಿ ಲಿಂಗಭೇದವನ್ನು ಹೋಗಲಾಡಿಸುವ ಪ್ರಯತ್ನ ಮಾಡುತ್ತಾಳೆ.

*ಅಂಗವ ಲಿಂಗಮುಖಕ್ಕೆ ಅರ್ಪಿಸಿ*
*ಅಂಗ ಅನಂಗವಾಯಿತ್ತು !*
*ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು !*
*ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಗಿತ್ತು !*

ಲಿಂಗ-ಮನ-ಭಾವವಳಿದ ಕಾರಣ ಕಾಯ ಅ ಕಾಯ ವಾಯಿತ್ತು!

*ಎನ್ನ ಅಕಾಯದ ಸುಖವ ಲಿಂಗಭೋಗಿಸುವನಾಗಿ*
*ಶರಣಸತಿ - ಲಿಂಗಪತಿಯಾದೆನು !*
*ಇದು ಕಾರಣ ಚೆನ್ನಮಲ್ಲಿಕಾರ್ಜುನಯ್ಯನೆಂಬ*
*ಗಂಡನ ಒಳಹೊಕ್ಕು ಬೆರಸಿದೆನು !!*

ಈ ರೀತಿಯಾಗಿ ಸ್ತ್ರೀಯನ್ನು ಆಧ್ಯಾತ್ಮಿಕ, ನೈತಿಕ ಮತ್ತು ವೈಚಾರಿಕ ದೃಷ್ಟಿಯಿಂದ ಪುರುಷನಿಗೆ ಸರಿಸಮಾನವಾಗಿ ಕಂಡದ್ದು ಸಾಮಾಜಿಕವಾಗಿ ಮಹಿಳೆಯ ಸ್ಥಾನಮಾನವನ್ನು ಎತ್ತರಿಸುವ ಪ್ರಯತ್ನವಾಗಿ ಕಾಣುತ್ತದೆ. ಆಧ್ಯಾತ್ಮಿಕ ಚಿಂತನೆಗಳನ್ನು ಪುರುಷರೊಂದಿಗೆ ಹಂಚಿಕೊಳ್ಳುವ, ಲಿಂಗದೀಕ್ಷೆ, ವಿಭೂತಿಧಾರಣೆಯಂತಹ ಧಾರ್ಮಿಕ ವಿಧಿಗಳಲ್ಲೂ ಪಾಲ್ಗೊಳ್ಳುವ ಅವಕಾಶ ಮಹಿಳೆಯರಿಗೆ ಲಭಿಸಿದ್ದು, ಮಹಿಳಾ ಪ್ರಗತಿಗೆ ಶಿವಶರಣರು ನೀಡಿದ ಗುರುತರ ಕಾಣಿಕೆ ಎಂದೇ ಭಾವಿಸಬಹುದು, ಇಂತಹ ಸ್ತ್ರೀವಾದೀ ವಿಚಾರಗಳಿಗೆ ಅಕ್ಕ ನೀಡುವ ಪ್ರತಿಸ್ಪಂದನೆಯೂ ಕಡೆಗಣಿಸುವಂಥದಲ್ಲ.

ಅನನ್ಯ ಸಾಧಕಿಯಾಗಿದ್ದ ಅಕ್ಕನ ಚರಿತ್ರೆ ನೇರವಾಗಿ ಉಪಲಬ್ಧವಾಗುವುದಿಲ್ಲ. ಹರಿಹರ, ಚನ್ನಬಸವಾಂಕ, ರಾಚಕವಿ ಅಥವಾ ಶೂನ್ಯ ಸಂಪಾನಕಾರರು – ಇವರೆಲ್ಲ ನೀಡುವ ಮಾಹಿತಿಯ ಆಧಾರದ ಮೇಲೆ ಅಕ್ಕನ ಬದುಕನ್ನು ಗಮನಿಸಿದರೆ, ಧಾರ್ಮಿಕ ಹಿನ್ನೆಲೆಯಿದ್ದ ಸಂಪ್ರದಾಯಸ್ಥ ಕುಟುಂಬದಲ್ಲಿ ಬೆಳೆದವಳಾಗಿ ಅವಳಿಗೆ ಸಹಜವಾಗಿಯೇ ಧಾರ್ಮಿಕತೆ ಮೈಗೂಡಿತ್ತು ಎಂದು ತಿಳಿದು ಬರುತ್ತದೆ. ವಿವಾಹ ಪೂರ್ವದಲ್ಲೇ ಅವಳು ಅಲೌಕಿಕ ಸ್ತರದಲ್ಲಿ ನೆಲೆಗೊಂಡಿದ್ದಾಳೆನ್ನುವುದಕ್ಕೆ, ತನ್ನಲ್ಲಿ ಅನುರಕ್ತನಾದ ಜೈನರಾಜನನ್ನು ವರಿಸುವಂತೆ ತಂದೆ ತಾಯಿಯರು ಸೂಚಿಸಿದಾಗ, ಅವಳು –

*ಆನೇಕೆ ಭವಿಯೇಕೆ ಭಕ್ತರೀ ಮಾತೇಕೆ*
*ಏನಾದಡಂ ಭವಿಯನೊಲ್ಲೆನೀ ಭ್ರಾಂತೇಕೆ ?*
*ಹೋಗಲಾ ವಸಂತಕ ನಿನಗೆ ಸೋಲ್ವವರಿಲ್ಲ*
*ನಾಗಭೂಷಣನ ಭಕ್ತರ್ಗೆ ಭವಿ ಸರಿಯಲ್ಲ (ಹರಿಹರ)*
*ಜೀವದರೆಯ ಮಲ್ಲಿಕಾರ್ಜುನಯ್ಯನ ಭಾವೆಯಮಾನೆಂದು*
(ಚೆನ್ನಬಸವಾಂಕ)

ನೀಡುವ ಉತ್ತರವೇ ಉತ್ತರ ಆಕೆಯ ದಿಟ್ಟತನವನ್ನು ಸೂಚಿಸುತ್ತದೆ.

ವಿವಾಹವೆನ್ನುವುದೇ ಅಕ್ಕನ ಬದುಕಿನ ನಿರ್ಣಾಯಕ ಹಂತ. ಅದೇ ಅವಳು ಸಾಮಾಜಿಕ ಬಂಧನವನ್ನು ಹರಿದು ಹೊರಬರಲು ಇದ್ದ ರಹದಾರಿ. ಪುರುಷನ ಆಶ್ರಯದಲ್ಲಿರಬೇಕಾದ್ದೇ ಹೆಣ್ಣಿನ ಧರ್ಮ, ಪರಮ ಕರ್ತವ್ಯ ಎನ್ನುವ ಪುರಾತನ ನಿಬಂಧನೆಗಳ ಮಧ್ಯೆಯು, ಶಿವಶರಣರು ಹೆಣ್ಣಿಗೆ ಸ್ವಲ್ಪ ಮಟ್ಟಿನ ಸ್ವಾತಂತ್ರ್ಯವನ್ನು ಬಳಸಿಕೊಳ್ಳಬೇಕೆಂಬ ಮತ್ತೊಂದು ಚೌಕಟ್ಟನ್ನು ಹಾಕಿದ್ದಂಥ ಆ ಸಂದರ್ಭದಲ್ಲಿ, ಅಕ್ಕಮಹಾದೇವಿ ಎರಡೂ ಚೌಕಟ್ಟನ್ನು ಮೀರಿ ನಿಲ್ಲುವುದನ್ನು ಗುರುತಿಸಬಹುದು. 'ಅವಳಿಗೆ ಸಮಸ್ಯೆ' ಎನಿಸುವ ಮದುವೆಯ ವಿಚಾರ ಉದ್ಭವಿಸದೇ ಹೋಗಿದ್ದರೆ, ಅದಕ್ಕೊಂದು ಹೋರಾಟ, ಅಂತಿಮ ಜಯದ ಸುಖವನ್ನು ಅವಳು ಹೊಂದುವುದು ಸಾಧ್ಯವೇ ಆಗುತ್ತಿರಲಿಲ್ಲ. ತನ್ನ ವಿವಾಹ ಬಂಧನವನ್ನೇ ಅಕ್ಕ ತನ್ನ ಬದುಕಿನ ಅಧಃಪತನ, ಭವಬಂಧನದ ಪರಾಕಾಷ್ಠೆ ಎಂದು ಭಾವಿಸುವುದರಿಂದಲೇ ಒಂದು ಸಾಮಾಜಿಕ ವ್ಯವಸ್ಥೆಯಾದ ವಿವಾಹ ಬಂಧನವನ್ನು ಅವಳು ಧಿಕ್ಕರಿಸಿ ಹೊರಬರುತ್ತಾಳೆ (ಅವಳ ವಿವಾಹವಾಗಿತ್ತೇ ಅಥವಾ ಇಲ್ಲವೇ ಎನ್ನುವುದು ಇಲ್ಲಿ ಮುಖ್ಯವಲ್ಲ. ಅವಳ ವಿವಾಹದ ವಿಷಯ, ಮಾತ್ರ ಪ್ರಸ್ತುತ), ಇದು ಸಾಧ್ಯವಾಗುವುದೂ ಅವಳ ಆಧ್ಯಾತ್ಮಭಾವದ ತೀವ್ರತೆಯಿಂದಾಗಿಯೇ.

*"ಹರನೇ ನೀನೆನಗೆ ಗಂಡನಾಗಬೇಕೆಂದು*
*ಅನಂತಕಾಲ ತಪಿಸಿದ್ದೆ ನೋಡಾ !"*

ಎನ್ನುವಾಗ, ಅಥವಾ

*ಇಹಕ್ಕೊಬ್ಬ ಗಂಡನೆ ? ಪರಕ್ಕೊಬ್ಬ ಗಂಡನೆ ?*
*ಲೌಕಿಕಕ್ಕೊಬ್ಬ ಗಂಡನೆ ? ಪಾರಮಾರ್ಥಿಕಕ್ಕೊಬ್ಬ ಗಂಡನೆ ?*

ಅಥವಾ

*ಎರದ ಮುಳ್ಳಿನಂತೆ ಪರಗಂಡನೆನಗವ್ವ*
*ಸೋಂಕಲವ್ವೆ ಸುಳಿಯಲಮ್ಮೆ ! ನಂಬಿನಚ್ಚಿ ಮಾತಾಡಲಮ್ಮೆನವ್ವ*
*ಚನ್ನಮಲ್ಲಿಕಾರ್ಜುನನಲ್ಲನುಳಿದು ಗಂಡರ ಉರದಲ್ಲಿ*
*ಮುಳ್ಳೆಟೆಂದು ನಾನಪ್ಪಲಮ್ಮೆನವ್ವ*

ಎನ್ನುವಾಗ, ಅವಳು ಭವದ ಬದುಕಿಗೂ ಮುನ್ನವೇ ಮತ್ತೊಬ್ಬ ಗಂಡನನ್ನು ಹೊಂದಿರುವುದಾಗಿ ಹೇಳಿ, ಮತ್ತೆ ಇನ್ನೊಬ್ಬನನ್ನು ಗಂಡನಾಗಿ ವರಿಸುವುದೂ ಧರ್ಮಬಾಹಿರ, ಸಮಾಜಬಾಹಿರ ಎಂಬ ಅಭಿಪ್ರಾಯವನ್ನೇ ಹೇಳಿದ್ದಾಳೆ ಎನ್ನಬಹುದು. ಸಮಾಜಕ್ಕೆ ಅಂಟಿಯೂ ಅಂಟದಂತಹ ಅವಳ ನಿಲುವಿಗೆ ಉದಾಹರಣೆಯಾಗಿ ಒಂದು ಹಂತದಲ್ಲಿ ಅವಳು ಹೇಳುವ "ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲ ತಾರೆನು!" ಎನ್ನುವಾಗಲೂ ತಾನು ಸಮಾಜ ವಿರೋಧಿ, ಅಥವಾ ಸಮಾಜ ಬಾಹಿರ ಕೃತ್ಯವನ್ನು





ಮಾಡುವುದಿಲ್ಲ ಎಂದು ವಾಚಿಕವಾಗಿಯೇ ಸೂಚಿಸುತ್ತಾಳೆ. ಅಂದರೆ ಅವಳು ವಿವಾಹವನ್ನು ಧಿಕ್ಕರಿಸುವುದರಿಂದಾಗಲೀ, ದಿಗಂಬರತ್ವವನ್ನು ಸ್ವೀಕರಿಸುವುದರಿಂದಾಗಲೀ, ಅವಳು ಸಮಾಜ ವಿರೋಧಿ ಭಾವದಿಂದಲೇ ಮಾಡಿದಳೆನ್ನಲಾಗುವುದಿಲ್ಲ. ಬದಲಿಗೆ ಅದು ವೈಯುಕ್ತಿಕ ಆಧ್ಯಾತ್ಮದ ಸೆಳೆತವಾಗಿತ್ತೆಂದೇ ಹೇಳಬಹುದು.

*ಸಂಸಾರವೆಂಬ ಹಗೆಯಯ್ಯ ತಂದೆ*
*ಎನ್ನ ವಂಶವಂಶದಪ್ಪದೆ ಅರಸಿಕೊಂಡು ಬರುತ್ತಿದೆಯಯ್ಯ*
*ಎನ್ನುವನರಸಿಯರಸಿ ಹಿಡಿದುಕೊಲ್ಲುತ್ತಿದೆಯಯ್ಯ*
*ನಿಮ್ಮ ಮರವೊಕ್ಕೆ ಕಾಯಯ್ಯ !*
*ಎನ್ನ ಬಿನ್ನಪವನವಧಾರು ಚೆನ್ನಮಲ್ಲಿಕಾರ್ಜುನಯ್ಯ*

೨

*ಬೆಂದ ಸಂಸಾರ ಬೆಂಬಿಡದೆ ಕಾಡುತ್ತಿರುವುದಯ್ಯ !*
*ಏವೆನಯ್ಯ ಏವೆನಯ್ಯ ?*
*ಅಂದಂದಿನ ದಂದುಗಕ್ಕೆ ಏವೆನಯ್ಯ ಏವೆನಯ್ಯ*
*ಬೆಂದೊಡಲ ಹೊರೆವುದಕ್ಕೆ ನಾನಾರೆ !!*
*ಚೆನ್ನಮಲ್ಲಿಕಾರ್ಜುನ ಕೊಲ್ಲುಕಾಯಿ ನಿಮ್ಮ ಧರ್ಮ*

೩

*ತೆರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ*
*ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ*
*ಮನ ಬಂದುದ ಬಯಸಿ ಬೇವುತ್ತಿದ್ದೇನೆ ಅಯ್ಯಾ*
*ಎನ್ನ ಮನದ ದುರಾಶೆಯ ಮಾಣಿಸಿ*
*ನಿಮ್ಮತ್ತ ತೋರಾ ಚೆನ್ನಮಲ್ಲಿಕಾರ್ಜುನಾ*

ಎಂದು ಹೇಳುವ ಅಕ್ಕ, ಎಲ್ಲಿ ತಾನು ಭವಜೀವನಕ್ಕೆ ಒಲಿದು ಬಿಡುವೆನೋ ಎಂಬ ಆತಂಕ ಹೊಂದಿದ್ದಳೆಂಬಂತೆ ಕಾಣಬರುತ್ತದೆ.

*ಎನ್ನ ಮಾಯಾದ ಮದವ ಮುರಿಯಯ್ಯ*
*ಎನ್ನ ಕಾಯದ ಕತ್ತಲೆಯ ಕಳೆಯಯ್ಯ*
*ಎನ್ನ ಜೀವದ ಜಂಜಡವ ಮಾಡಿಸಯ್ಯ*
*ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯ*
*ಎನ್ನ ಸುತ್ತಿದ ಪ್ರಪಂಚವ ಬಿಡಿಸು ನಿಮ್ಮ ಧರ್ಮ*

ಎನ್ನುವಾಗ, ತನ್ನ ದೇಹ-ಮೋಹದ ಯಾವುದೋ ಜಂಜಾಟದಲ್ಲಿ ಅವಳು ಸಿಲುಕಿದ್ದು, ಅದರಿಂದ ಹೊರಬರುವ ಹಾದಿಯ ಅನ್ವೇಷಣೆಯಲ್ಲಿದ್ದಳೆಂದು ತಿಳಿದುಬರುತ್ತದೆ. ಎಲ್ಲೆಲ್ಲಿ ತನ್ನನ್ನು ಭವಪಾಶ ಅಥವಾ ಸಂಸಾರಪಾಶ ಸುತ್ತಿಕೊಳ್ಳುತ್ತದೆ ಎಂದವಳಿಗನಿಸುತ್ತದೋ ಅಲ್ಲೆಲ್ಲಾ ಅವಳು ಆಧ್ಯಾತ್ಮಿಕ ಸ್ತರದಲ್ಲಿ ನಿಂತು ಬಿಡುಗಡೆಗೆ ಯತ್ನಿಸುತ್ತಾಳೆ.

*ಊರ ಸೀರೆಗೆ ಅಸಗ ತಡಬಡಗೊಂಬಂತೆ*
*ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು ಎಂದು ನೆನನೆನೆದು*
*ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯ*
*ಚೆನ್ನಮಲ್ಲಿಕಾರ್ಜುನಯ್ಯ.*

*ರತ್ನದ ಸಂಕೋಲೆಯಾದರೆ ತೊಡರಲ್ಲವೇ ?*
*ಮುತ್ತಿನ ಬಲೆಯಾದರೆ ಬಂಧನವಲ್ಲವೇ ?*
*ಚಿನ್ನದ ಕತ್ತಿಯಲ್ಲಿ ತಲೆಯ ಹೊಯ್ದರೆ ಸಾಯದಿಪ್ಪರೆ ?*
*ಲೋಕದ ಭಜನೆಯ ಭಕ್ತಿಯಲಿ ಸಿಲುಕಿದರೆ*
*ಜನನ ಮರಣ ಬಿಡುವುದೇ ಚೆನ್ನಮಲ್ಲಿಕಾರ್ಜುನ*

ಇಲ್ಲಿ ಹೀಗೆ ಸಂಸಾರ ಎನ್ನುವುದನ್ನವಳು ಒಂದು ಬಂಧನ ಎಂದು ತಿಳಿಯುವುದರಿಂದಲೇ, ಸಾಮಾಜಿಕ ವ್ಯವಸ್ಥೆಯಾದ ವಿವಾಹ ಪದ್ಧತಿಯನ್ನೇ ತಿರಸ್ಕರಿಸಿ, ತಾನೊಲಿನ 'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವನ' ಕಡೆ ನಿರಂತರ ತುಡಿಯುತ್ತಾಳೆ.

*ಭವಿಸಂಗವಳಿದು ಶಿವಭಕ್ತನಾದ ಬಳಿಕ*
*ಭಕ್ತಂಗೆ ಭವಿಸಂಗಮತಿಘೋರ ನರಕ*
*ಶರಣಸತಿ - ಲಿಂಗಪತಿಯಾದ ಬಳಿಕ*
*ಶರಣಂಗೆ ಸತಿಸಂಗವತಿಘೋರ ನರಕ*

ಇಲ್ಲಿ ನಾವೊಂದಂಶವನ್ನು ಗಮನಿಸಬೇಕು. ದಾಂಪತ್ಯ ಎನ್ನುವ ಸಾಮಾಜಿಕ ಕಟ್ಟುಪಾಡನ್ನು ಅವಳು ತನ್ನ ವೈಯುಕ್ತಿಕ ಕಾರಣಕ್ಕಾಗಿ ವಿರೋಧಿಸುತ್ತಾಳೆಯೇ ವಿನಃ ಅಂದಿನ ಸಮಾಜದ ಕಣ್ತೆರೆಸುವ ಪ್ರಜ್ಞಾಪೂರ್ವಕ ಆಲೋಚನೆಯಿಂದಲ್ಲ. ಅಕ್ಕ ಅಂತರ್ಮುಖಿ, ಹೊರ ಜಗತ್ತಿನ ಪರಿವೆ ಅವಳಿಗೆ ಬೇಡ, ಅವಳ ಚಿಂತೆ-ಚಿಂತನೆಗಳೇನಿದ್ದರೂ ತನ್ನ ಬದುಕಿನ ಪರಿಮಿತಿಯೊಳಗೇ, ಸುತ್ತಲೇ. ಆದರೆ ಅವಳ ವೈಯುಕ್ತಿಕ ಅನುಭವ, ಅನಿಸಿಕೆ, ಆಧ್ಯಾತ್ಮಗಳು, ಒಂದು ವಿಶಾಲ ಅರ್ಥದಲ್ಲಿ ಸಮಾಜಕ್ಕೆ ಬೆಳಕು ಚೆಲ್ಲುವುದರಲ್ಲಿ ಸಂಶಯವಿಲ್ಲ. ಹಾಗೆ ಅವಳ ಪತಿತ್ಯಾಜ್ಯದ ವಿಚಾರ ಸಮಾಜದ ಎಲ್ಲ ಸಾಂಪ್ರದಾಯಿಕ ಶಕ್ತಿಗಳನ್ನು ವಿರೋಧ ಕಟ್ಟಿಕೊಳ್ಳುವ ದಿಟ್ಟ ಕ್ರಿಯೆಯೂ ಆಗುತ್ತದೆ. ಇಡೀ ಸ್ತ್ರೀ ಸಂಕುಲವನ್ನವಳು ಪ್ರತಿನಿಧಿಸುತ್ತಾಳೆ.

ಈ ವಿರೋಧಕ್ಕೆ ಅವಳು ನೀಡುವ ಪ್ರತಿಕ್ರಿಯೆಯೂ ಅಷ್ಟೇ ಪ್ರಮುಖವಾದದ್ದು.

*ಕೈಸಿರಿಯ ದಂಡವ ಕೊಳ್ಳಬಹುದಲ್ಲದೆ*
*ಮೈಸಿರಿಯ ದಂಡವ ಕೊಳಲುಂಟೆ ?*
*ಉಟ್ಟಂತ ಉಡಿಗೆ ತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ*
*ಮುಚ್ಚಿ ಮುಸುಕರ್ದ ನಿರ್ವಾಣವ ಸೆಳೆದುಕೊಳ್ಳಬಹುದೇ ?*
*ಚೆನ್ನಮಲ್ಲಿಕಾರ್ಜುನನ ಬೆಳಗನುಟ್ಟು ಲಜ್ಜೆಗೆಟ್ಟನವಳಿಗೆ*
*ಉಡಿಗೆ ತೊಡಿಗೆಯ ಹಂಗೇಕೋ ಮರುಳೇ ?*

ಲಜ್ಜೆ, ನಡದೆ, ಸ್ವಾಭಿಮಾನಗಳ ಹೆಸರಿನಲ್ಲಿ ಹೆಣ್ಣಿನ ಕೊರಳಿಗೆ ಸುತ್ತಿದ್ದ ದಾಸ್ಯದ ಉರುಳನ್ನು ಅವಳು ಮುಕ್ತಗೊಳಿಸಿದ್ದಾಳೆ. ಆ ಕಾಲಕ್ಕೆ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ರಂಗಗಳಲ್ಲಿ ಹೆಣ್ಣಿಗೂ ಸಮಾನ







ಅವಕಾಶ ಸಾಧ್ಯವೆನಿಸಿದ್ದನ್ನು ಅವಳೇ ಸಾಕ್ಷೀಭೂತವಾಗಿ ನಿಂತು ತೋರಿಸಿದ್ದಾಳೆ. ಹೆಣ್ಣು ಸಬಲೆ ಎನ್ನುವ ನಿರ್ಭಯ ಭಾವವನ್ನು ಹೀಗೆ ದಾಖಲಿಸುತ್ತಾಳೆ.

*ಆರೂ ಇಲ್ಲದವಳೆಂದು*
*ಆಳಿಗೊಳಲುಬೇಡ ಕಂಡಯ್ಯ*
*ಏನು ಮಾಡಿದಡೆಯೂ ನಾನಂಜುವಳಲ್ಲ*
*ತರಗೆಲೆಯ ಮೆಲ್ಲಿದು ನಾನಿಹೆನು*
*ಸುರಗಿಯ ಮೇಲೊರಗಿ ನಾನಿಹೆನು*
*ಚೆನ್ನಮಲ್ಲಿಕಾರ್ಜುನಯ್ಯ ಕರ ಕಡೆ ನೋಡಿದಡೆ*
*ಒಡಲನು ಪ್ರಾಣವನು ನಿಮಗೊಪ್ಪಿಸಿ ಶುದ್ಧಳಹೆನು.*

ಸಮಾಜಕ್ಕೆ ಸನ್ನಿವೇಶಗಳ ಹಾದಿಬದಿಯಲ್ಲೇ ಕ್ರಮಿಸುವ ಅಕ್ಕನ ಚಿಂತನೆಗಳು ಒಂದು ಹಂತದಲ್ಲಿ ತಾತ್ವಿಕ ಮಾರ್ಗಕ್ಕೆ ಹೊರಳುತ್ತವೆ. ಅದೇ ರೀತಿ ತಾತ್ವಿಕ ನೆಲೆಯಲ್ಲಿ ಬೆಳೆಯುತ್ತಾ ಹೋಗಿ ಇಡೀ ಸಾಮಾಜಿಕ ಸಂದರ್ಭಕ್ಕೆ ಅನ್ವಯಿಸಿಬಿಡುವುದನ್ನು ಅವಳ ವಚನಗಳಲ್ಲಿ ಕಾಣಬಹುದು. ಆಸೆ ಆಮಿಷ, ಲೋಭ, ಮೋಹ, ಕಾಮ, ಕ್ರೋಧ, ಮದ, ಮಾತ್ಸರ್ಯಾದಿಗಳು ಖಂಡನೆಗೆ ಅವಳು ಕರೆ ನೀಡುತ್ತಾಳೆ.

*ಮನೆ ಮನೆ ತಪ್ಪದೆ ಕಯ್ಯೊಡ್ಡಿ ಬೇಡುವಂತೆ ಮಾಡಯ್ಯ.*
*ಬೇಡಿದೊಡೆ ಇಕ್ಕದಂತೆ ಮಾಡಯ್ಯ*
*ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ*
*ನೆಲಕ್ಕೆ ಬಿದ್ದೊಡೆ ನಾನೆತ್ತಿಕೊಂಬುದಕ್ಕೆ ಮುನ್ನವೇ*
*ಶುನಿ ಎತ್ತಿಕೊಂಬಂತೆ ಮಾಡಯ್ಯ, ಚೆನ್ನಮಲ್ಲಿಕಾರ್ಜುನಯ್ಯ*

ಎನ್ನೊಂದು ಆಸೆಯನ್ನು ಹತ್ತಿಕ್ಕುವ ಬಗೆಯನ್ನು ಕಂಡುಕೊಳ್ಳುತ್ತಾಳೆ.

ಸ್ಮೃತಿಕಾರರ ಕೊಡುಗೆಯಾಗಿ ಸಮಾಜದಲ್ಲಿ ಕೇವಲ ಲಿಂಗಭೇದ ಮಾತ್ರವಲ್ಲದೆ, ವರ್ಗಭೇದ, ಜಾತಿಭೇದಗಳ ಕಾವೂ ಇದ್ದದ್ದು ಚರಿತ್ರೆಯಿಂದ ತಿಳಿದುಬರುತ್ತದೆ. ಜಾತಿ ಅಸಮಾನತೆಯ ವಿಚಾರದಲ್ಲಿ ಪ್ರಗತಿ ಪರತೆ, ಸಂಪ್ರದಾಯ ಶರಣತೆ, ಸಂದಿಗ್ಧತೆಯ ಸಂಕೀರ್ಣ ಅಂಶಗಳು, ಶಿವಶರಣರ ಆಂದೋಲನದಲ್ಲಿ ಮುಖ್ಯವಾಗುವುದನ್ನು ನಾವು ಕಾಣುತ್ತೇವೆ. ಆರ್ಥಿಕ ಅಸಮಾನತೆ, ಜಾತಿ ಅಸಮಾನತೆಯಂತಹ ವಿಚಾರಗಳು, ವಿರಾಗಿಣಿಯಾದ ಅಕ್ಕಮಹಾದೇವಿಯನ್ನು ನೇರವಾಗಿ ಬಾಧಿಸಿರದಿದ್ದರೂ ಅವಳೇ ಒಂದು ಸಂದರ್ಭದಲ್ಲಿ ಆ ವಿಷಯವನ್ನು ಉದ್ದೇಶಿಸುತ್ತಾಳೆ -

*ಈಳೆ-ನಿಂಬೆ-ಮಾವು-ಮಾದಲಕ್ಕೆ*
*ಹುಳಿ ನೀರನೆರೆದವರಾರಯ್ಯಾ?*
*ಕಬ್ಬು-ಬಾಳೆ-ನಾರಿಕೇಳಕ್ಕೆ*
*ಸಿಹಿ ನೀರನೆರೆದವನರಾರಯ್ಯಾ?*
*ಕಳವೆ-ಶಾಲಿಗೆ ಓಗರದ ಉದಕವನೆರೆದವರಾರಯ್ಯಾ?*
*ಮರುಗ-ಮಲ್ಲಿಗೆ-ಪಚ್ಚೆಗೆ*
*ಪರಿಮಳದುದಕವನೆರೆದವರಾರಯ್ಯಾ?*
*ಇಂತೀ ಜಲ ಒಂದೇ, ನೆಲ ಒಂದೇ, ಆಕಾಶವೊಂದೇ*

ಎಂದು ಹೇಳಿ ಪಂಚಭೂತಗಳೂ ಸಕಲ ಜೀವರಾಶಿಗಳಿಗೂ ಒಂದೇ ಆಗಿರುವಾಗ, ನಮ್ಮ ನಮ್ಮಲ್ಲಿ ಮೇಲುಕೀಳಿನ ಭಾವವೇಕೆ ಎಂಬ ತಿರುಳು ಬಿಚ್ಚಿಡುತ್ತಾಳೆ.

ಹಾಗೆ, ತ್ರಿಕರಣ ಶುದ್ಧವಿಲ್ಲದವರಲ್ಲಿ ತಾಂಬೂಲವನೊಲ್ಲನಯ್ಯ ನೀನು, ಒಳಗೆ ಶೋಧಿಸಿ, ಹೊರಗೆ ಶುದ್ಧವಿಸಿ, ಒಳ-ಹೊರಗೆಂಬ ಉಭಯ ಶಂಕೆಯ ಕಳೆದು, ಎಂದು ಬಸವಣ್ಣನವರ ಕಲ್ಪನೆಯಾದ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿಯನ್ನು ಅಕ್ಕನೂ ಪ್ರತಿಪಾದಿಸುತ್ತಾಳೆ.

*ಅರಿಯದವರೊಡನೆ ಸಂಗವ ಮಾಡಿದರೆ*
*ಕಲ್ಲ ಹೊಯ್ದು ಕಿಡಿಯ ತೆಗೆದುಕೊಂಬಂತೆ*
*ಬಲ್ಲವರೊಡನೆ ಸಂಗವ ಮಾಡಿದರೆ*
*ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ*
*ಚೆನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣರ ಸಂಗ*
*ಕರ್ಪೂರ ಗಿರಿಯ ಉರಿಕೊಂಡಂತೆ*

ಎನ್ನುವ ವಚನದ ಮೂಲಕ ಸಹವಾಸ ಹೇಗಿರಬೇಕು ಎನ್ನುವುದನ್ನೂ ಮಹಾದೇವಿಯಕ್ಕ ಸೂಚಿಸುತ್ತಾಳೆ. ಇಷ್ಟಾದರೂ ಇವನ್ನೆಲ್ಲ ಅವಳು ಮತ್ತೆ ತನ್ನ ಆಧ್ಯಾತ್ಮದ ನೆಲೆಯಲ್ಲೇ ಚೆನ್ನಮಲ್ಲಿಕಾರ್ಜುನನ ಗುಂಗಿನಲ್ಲೇ ಹೇಳುತ್ತಿರುವುದು ಗಮನಾರ್ಹ.

ಲೌಕಿಕ ವಾತಾವರಣದಲ್ಲಿದ್ದೂ ನಿಚ್ಚಳ ಅಲೌಕಿಕ ನೆಲೆಯಲ್ಲಿ ವಾಸ್ತವ್ಯಗೊಳ್ಳುವ ಮಹಾದೇವಿಯಕ್ಕನ ವಚನಗಳು ಅವಳ ಬಾಳಿನ ಗಟ್ಟಿ ಅನುಭವದ ಆಧಾರದಲ್ಲೇ ಮೂಡಿಬಂದವು ಎನ್ನುವುದು ಸತ್ಯ. ಅವಳ ಅನುಭವವೇ ಅನುಭಾವವಾಗಿ ಘಟ್ಟಿಸಿ, ಅದರಲ್ಲೇ ಸಮಾಜದ ಅನೇಕ ಅಂಕಡೊಂಕುಗಳನ್ನು ಕಟ್ಟು ಕಟ್ಟಲೆ, ಅಂಧಶ್ರದ್ಧೆ ಗಳನ್ನು ಒಡೆಯುತ್ತವೆ, ವಿರಾಗಿಣಿಯೊಬ್ಬಳ ಸಮಾಜವನ್ನುದ್ದೇಶಿಸುವ ಪರಿ ಅನುಭಾವಕ್ಕಿಂತ ಬೇರೆಯಾಗಿರಲಾರದು ಎಂದೂ ನಾವರಿಯಬಹುದು. ಒಟ್ಟಿನಲ್ಲಿ ಅಕ್ಕಮಹಾದೇವಿ, ತಾನು ಬಾಳಿ ಬದುಕಿದ ಸಮಾಜದಲ್ಲೇ ಸಮಾಜದ ಎಲ್ಲೆಗಳನ್ನು ಮೀರಿ ಬದುಕಿ ಬಾಳಿದ, ತಾವರೆ ಎಲೆ ಮೇಲಿನ ಜಲಬಿಂದು, ಅವಳ ನಿರ್ವ್ಯಾಮೋಹತೆಗೆ ಒಂದು ಉತ್ತಮ ಉದಾಹರಣೆಯಾಗಿ ಈ ವಚನ :

*ಹಣ್ಣಮೆದ್ದ ಬಳಿಕ ಆ ಮರವನಾರು ತರಿದರೇನು ?*
*ಹೆಣ್ಣು ಬಿಟ್ಟ ಬಳಿಕ ಆಕೆಯನಾರು ಕೂಡಿಕೊಂಡರೇನು ?*
*ಮಣ್ಣ ಬಿಟ್ಟ ಬಳಿಕ ಆ ಕೆಯ್ಯನಾರುತ್ತರೇನು ?*
*ಚೆನ್ನಮಲ್ಲಿಕಾರ್ಜುನನರಿದ ಬಳಿಕ*
*ಆ ಕಾಯವ ನಾಯಿ ತಿಂದರೇನು, ನೀರ ಕುಡಿದರೇನು ?*

○









## ೪೮ನೆಯ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ಮಹಾಧಿವೇಶನ : ಒಂದು ವರದಿ



ಸರ್ವಸದಸ್ಯರ ಮಹಾಧಿವೇಶನವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸುತ್ತಿರುವುದು.

ದಿನಾಂಕ ೧೫-೧೨-೨೦೦೨ರಂದು ಭಾನುವಾರ ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ೪೮ನೇ ಸರ್ವಸದಸ್ಯರ ಮಹಾಧಿವೇಶನವು ಬೆಳಿಗ್ಗೆ ೧೧ ಗಂಟೆಗೆ ವಸ್ತುಪ್ರದರ್ಶನದ ಆವರಣದಲ್ಲಿ ಸಮಾವೇಶಗೊಂಡಿತು. ಸಭೆ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎಸ್. ಚನ್ನಬಸಪ್ಪನವರು ಎಲ್ಲರನ್ನು ಸ್ವಾಗತಿಸಿದರು. ಪ್ರಾಸ್ತಾವಿಕ ವಾಗಿ ಮಾತನಾಡುತ್ತಾ ಶ್ರೀಮಠದಲ್ಲಿ ಸ್ವಚ್ಛತೆಯನ್ನು ಕಾಪಾಡಲು ಒಂದು ಬೃಹತ್ ಯೋಜನೆಯ ರೂಪುರೇಷೆಯ ಬಗ್ಗೆ ಸಭೆಗೆ ತಿಳಿಸಿದರು. ಸಿದ್ಧಗಂಗಾ ಅಭಿವೃದ್ಧಿ ಯೋಜನೆಗೆ ಉದಾರವಾಗಿ ಕನಿಷ್ಠ ಮಾಸಿಕ ೧೦೦ ರೂ.ನಂತೆ ಎಲ್ಲರೂ ತಮ್ಮ ಕೊಡುಗೆಯನ್ನು ನೀಡುವುದರ ಮೂಲಕ ಉದ್ದೇಶಿತ ಯೋಜನೆ ಯಶಸ್ವಿಯಾಗಲು ಸಹಕರಿಸುವಂತೆ ಪ್ರಾರ್ಥಿಸಿದರು.

ಅಂತೆಯೇ ಪೂಜ್ಯ ಶ್ರೀಗಳವರಿಗೆ ೨೦೦೫ಕ್ಕೆ ಪೀಠಾರೋಹಣ ವಾಗಿ ೭೫ ವರ್ಷಗಳು ತುಂಬುತ್ತವೆ. ಇದರ ಸ್ಮರಣಾರ್ಥ ಪ್ಲಾಟಿನಮ್ ಜೂಬಿಲಿಯನ್ನು ನಾವೆಲ್ಲರೂ ಸೇರಿ ಮಾಡಬೇಕಾಗಿದೆ; ವಿದ್ಯಾರ್ಥಿ ಗಳಿಗೆ ಅನುಕೂಲವಾಗುಂತಹ ವಿದ್ಯಾರ್ಥಿನಿಲಯವನ್ನು ನಿರ್ಮಾಣ ಮಾಡಬೇಕಿದೆ. ಅಂತೆಯೇ ಸಂಘದ ಸುವರ್ಣ ಮಹೋತ್ಸವವನ್ನು ಆಚರಿಸಬೇಕಾಗಿದೆ. ಈ ಕಾರ್ಯದಲ್ಲಿ ಎಲ್ಲರ ಸಹಾಯ ಸಹಕಾರವನ್ನು ಕೋರಿದರು.

ಕಳೆದ ಸಾಲಿನಲ್ಲಿ ನಿಧನರಾದ ವಿದ್ವಾನ್ ಬಿ. ಗಂಗಪ್ಪನವರು, ಶ್ರೀ ಕೆ. ವೀರಭದ್ರಯ್ಯ ಹಾಗೂ ಮಾಜಿ ಸಚಿವ ಶ್ರೀ ನಾಗಪ್ಪನವರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು.

ಶ್ರೀ ಸಿದ್ಧಗಂಗಾ ಅಭಿವೃದ್ಧಿ ಯೋಜನೆ ಬಗ್ಗೆ ನಿವೃತ್ತ ವರಿಷ್ಠ ಪೊಲೀಸ್ ಅಧಿಕಾರಿಗಳು ಹಾಗೂ ಹಳೆಯ ವಿದ್ಯಾರ್ಥಿಗಳು ಆದ ಶ್ರೀ ಎಲ್. ರೇವಣಸಿದ್ಧಯ್ಯನವರು ಮಾತನಾಡಿ ಪೂಜ್ಯರ ಸೇವೆ ಮತ್ತು ಅವರ ಹೆಸರಿನಲ್ಲಿ ಹೇಳಿಕೊಂಡು ಹೋದರೆ ದಾನಿಗಳು ತಾವಾಗಿಯೇ ಹಣವನ್ನು ನೀಡುತ್ತಾರೆ. ಇದು ಪವಾಡ ಸದೃಶವಾದುದು. ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಸಂಘವು ಎಲ್ಲ ಸಂಘಗಳಿಗೂ ಆದರ್ಶವಾಗಿದೆ.




ಸರ್ವಸದಸ್ಯರ ಮಹಾಧಿವೇಶನದಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುವ ಡಾ. ಎಂ.ಎನ್. ಚನ್ನಬಸಪ್ಪ, ಶ್ರೀ ಬಿ.ಎಸ್. ಪರಮಶಿವಯ್ಯ, ಶ್ರೀ ರಂಗಹನುಮಯ್ಯ, ಶ್ರೀ ಗುರುದೇವಯ್ಯ, ಶ್ರೀ ನಾಗಭೂಷಣ ಶಾಸ್ತ್ರಿ ಮತ್ತು ಶ್ರೀ ದೇವೇಗೌಡ ಅವರು

ಶ್ರೀಮಂತ ಹೃದಯವಿರುವುದರಿಂದ ಸಂಸ್ಥೆ ಬೆಳೆದಿದೆ ಎಂದು ತಿಳಿಸಿದರು.

ಹಳೆಯ ವಿದ್ಯಾರ್ಥಿ ಸಂಘವು ಕಳೆದ ಸಾಲಿನಲ್ಲಿ ಕೈಗೊಂಡ ಕಾರ್ಯಕ್ರಮಗಳ ಬಗ್ಗೆ ಸಂಕ್ಷಿಪ್ತ ವರದಿಯನ್ನು ಜಂಟಿ ಕಾರ್ಯದರ್ಶಿಗಳಾದ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಸಭೆಯ ಮುಂದೆ ಮಂಡಿಸಿದರು.

ಹಳೆ ವಿದ್ಯಾರ್ಥಿಗಳು ಶ್ರೀಮಠಕ್ಕೆ ಬಂದಾಗ ವಸತಿ ಸೌಕರ್ಯಕ್ಕೆ ಅನುಕೂಲವಾಗುವಂತೆ ಹೊಸದಾಗಿ ನಿರ್ಮಾಣವಾಗುತ್ತಿರುವ ವಸತಿ ನಿಲಯದಲ್ಲಿ ೬ ಕೊಠಡಿಗಳನ್ನು ಪೂಜ್ಯರನ್ನು ಪ್ರಾರ್ಥಿಸಿ ಪಡೆದು ಅವುಗಳಲ್ಲಿ ಪೀಠೋಪಕರಣಗಳನ್ನು ಅಳವಡಿಸಲು ಸುಮಾರು ೧ ಲಕ್ಷ ರೂ.ಗಳ ಅಂದಾಜುಮಾಡಲಾಗಿದೆ. ಈಗಾಗಲೇ ಸಂಘದ ಕಾರ್ಯಕಾರಿ ಸಮಿತಿ ಸದಸ್ಯರು ತಲಾ ೧೦೦೦ ರೂ.ನಂತೆ ಕೊಟ್ಟ ಹಣ ೩೬,೦೦೦ ರೂ.ಗಳು ಸಂಗ್ರಹಣೆಯಾಗಿದೆ. ಆಸಕ್ತಿಯುಳ್ಳ ಸದಸ್ಯರು ೧೦೦೦ ರೂ.ಗಳನ್ನು ಈ ಯೋಜನೆಗೆ ನೀಡಬೇಕೆಂದು ಈ ಸಂದರ್ಭದಲ್ಲಿ ಮನವಿ ಮಾಡಿದರು.

ಪ್ರೊ. ಬಿ. ಗಂಗಾಧರಯ್ಯನವರು ಮಂಡಿಸಿದ ವಸ್ತುಪ್ರದರ್ಶನ ಮತ್ತು ಶ್ರೀ ಹೆಚ್.ಬಿ. ಗಂಗಾಧರಯ್ಯನವರು ಮಂಡಿಸಿದ ಸಿದ್ಧಗಂಗಾ ಮಾಸಪತ್ರಿಕೆಯ ವಾರ್ಷಿಕ ವರದಿಗಳನ್ನು ಸಭೆಯು ಸರ್ವಾನುಮತದಿಂದ ಅನುಮೋದಿಸಿತು. ಸದಸ್ಯರೆಲ್ಲರೂ 'ಸಿದ್ಧಗಂಗಾ' ಮಾಸಪತ್ರಿಕೆಗೆ ಆಜೀವ ಸದಸ್ಯರಾಗಬೇಕೆಂದು ಪ್ರಾರ್ಥಿಸಿದರು. ಸದಸ್ಯತ್ವ ಶುಲ್ಕವನ್ನು ೫೦೦ ರಿಂದ ೬೦೦ ರೂ.ಗಳಿಗೆ ಹೆಚ್ಚಿಸುವ ಬಗ್ಗೆ ಸಭೆ ಸರ್ವಾನುಮತದಿಂದ ನಿರ್ಣಯ ತೆಗೆದುಕೊಂಡಿತು.

ಬೆಂಗಳೂರು ಶಾಖಾ ಸಂಘದ ವರದಿಯನ್ನು ಶ್ರೀ ರಂಗಹನುಮಯ್ಯನವರು ನೀಡಿದರು. ಈಗಾಗಲೇ 'ಶ್ರೀ ಶಿವಕುಮಾರ ಸ್ವಾಮಿಗಳ ವಿದ್ಯಾಭಿವೃದ್ಧಿ ಟ್ರಸ್ಟ್' ರೂಪುಗೊಂಡಿದ್ದು ಅದರ ವತಿಯಿಂದ ಸ್ಥಾಪಿಸಿದ ಶಿಕ್ಷಣ ಸಂಸ್ಥೆ ಯಶಸ್ಸಿನ ಚಟುವಟಿಕೆಗಳನ್ನು ಸಭೆಗೆ ವಿವರವಾಗಿ ನೀಡಿದರು.

ಕೊಡಗು ಜಿಲ್ಲೆಯ ಶಾಖಾ ಸಂಘದ ವತಿಯಿಂದ ಶ್ರೀ ದೇವೇಗೌಡ ಮಾತನಾಡಿ ಪೂಜ್ಯರು ನೀಡಿದ ಮಾರ್ಗದರ್ಶನ










ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ



ಶ್ರೀ ಎಲ್. ರೇವಣಸಿದ್ಧಯ್ಯ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಮತ್ತು ಆಶೀರ್ವಾದದಿಂದ ನಮಗೆ ವಿಶೇಷ ಮನ್ನಣೆ ಸಮಾಜದಲ್ಲಿ ದೊರೆತಿದೆ ಎಂದು ತಿಳಿಸಿದರು. ಚಿಕ್ಕಮಗಳೂರು ಶಾಖಾ ಸಂಘದ ವತಿಯಿಂದ ಶ್ರೀ ನಾಗಭೂಷಣ ಶಾಸ್ತ್ರಿಯವರು ಮಾತನಾಡಿ ನಿಧಿಯ ಜೊತೆಗೆ ಧಾನ್ಯವನ್ನು ಸಂಗ್ರಹಿಸಿ ದಾಸೋಹ ವ್ಯವಸ್ಥೆ ಸುಗಮವಾಗಿ ನಡೆಯಲು ಪ್ರತಿಯೊಬ್ಬರು ಸಹಕರಿಸಬೇಕೆಂದು ತಿಳಿಸಿದರು.

ಹಾಸನ ಜಿಲ್ಲೆ ಶಾಖಾ ಸಂಘದ ವತಿಯಿಂದ ಮಾತನಾಡಿದ ಶ್ರೀ ಗುರುದೇವಯ್ಯನವರು ಶ್ರೀ ಶ್ರೀಗಳವರ ಹೆಸರನ್ನು ಹೇಳಿಕೊಂಡು ಹೋದರೆ ಅಸಾಧ್ಯವಾದುದೆಲ್ಲ ಸಾಧ್ಯವಾಗುತ್ತದೆ. ಶ್ರೀಗಳವರ ಹೆಸರಿನಲ್ಲಿ ಈಗಾಗಲೇ ಸಾಮೂಹಿಕ ಭವನವನ್ನು ಹಾಸನದಲ್ಲಿ ನಿರ್ಮಿಸಲಾಗಿದೆ ಎಂದು ತಿಳಿಸಿದರು.

ಮೈಸೂರಿನ ವಿದ್ವಾನ್ ಎಂ. ಶಿವಕುಮಾರ ಸ್ವಾಮಿ ಮಾತನಾಡಿ ಪೂಜ್ಯರ ಹೆಸರಿನಲ್ಲಿ ಒಂದು ನಿವೇಶನವು ಈಗಾಗಲೇ ಮಂಜೂರಾಗಿದೆ. ಅದನ್ನು ಶ್ರೀಗಳವರಿಗೆ ಒಪ್ಪಿಸಿ ಭೂಮಿ ಪೂಜೆಯನ್ನು ಮಾಡಬೇಕಾಗಿದೆ ಎಂದು ಸಭೆಗೆ ತಿಳಿಸಿದರು.

ಶ್ರೀ ಆರ್.ವಿ. ರಂಗಸ್ವಾಮಿ ಮಾತನಾಡಿ ನಾವು ಶ್ರೀಮಠದಲ್ಲಿ ಬೆಳೆದಿರುವುದರಿಂದ ಸಮಾಜದಲ್ಲಿ ಆದರ್ಶ ಬದುಕನ್ನು ಮಾಡಲು ಅವಕಾಶವಾಗಿದೆ ಎಂದು ತಿಳಿಸಿದರು.

ಶ್ರೀ ಬಿ.ಎಸ್. ಪರಮಶಿವಯ್ಯನವರು ಮಾತನಾಡಿ ಶ್ರೀಮಠದಲ್ಲಿ ನೈರ್ಮಲ್ಯದ ಕಡೆ ಹೆಚ್ಚು ಗಮನಹರಿಸಿ ನಿಧಿಯನ್ನು ಕೂಡಿಸಿ ಸ್ವಚ್ಛತೆಯನ್ನು ಕಾಪಾಡುವುದು ನಮ್ಮ ಕರ್ತವ್ಯಯವಾಗಿದೆ. ಅದಕ್ಕಾಗಿ ವೈಯಕ್ತಿಕವಾಗಿ ೨೫,೦೦೦ ರೂ.ಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದರು.

ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ಮಹಾಧಿವೇಶನ ಒಂದು ಮಹತ್ವದ ಸಭೆ. ತಾಯಿ ಮಗುವಿನ ಸಮಾವೇಶವಿದ್ದಂತೆ. ಈ ಸಭೆಯನ್ನು ಕಂಡು ನನಗೆ ತುಂಬಾ ಸಂತೋಷವಾಗಿದೆ; ಹೃದಯತುಂಬಿ ಬರುತ್ತಿದೆ. ಪೂಜ್ಯರ ಆಶೀರ್ವಾದ ನಮ್ಮೆಲ್ಲರ ಮೇಲೆ ಸದಾ ಇರಲೆಂದು ಪ್ರಾರ್ಥಿಸುತ್ತೇವೆ ಎಂದು ನುಡಿದರು.

ಪೂಜ್ಯ ಶ್ರೀಗಳು ಆಶೀರ್ವಚನ ನೀಡುತ್ತಾ ನಿಮ್ಮ ಸಮಯ ಸಂದರ್ಭಗಳನ್ನು ಬದಿಗೊತ್ತಿ ಹೆಚ್ಚು ಸಂಖ್ಯೆಯಲ್ಲಿ ಬಂದಿರುವುದು ನಮಗೆ ಹರ್ಷತಂದಿದೆ. ನಿಮ್ಮ ಅಭಿಮಾನ ಹಿರಿದು ಸಂಸ್ಥೆಯ ಬಗ್ಗೆ ಎಲ್ಲರೂ ಹೃದಯ ಬಿಚ್ಚಿ ಮಾತನಾಡಿದ್ದೀರಿ. ನಿಮಗೆ ಒಂದು ಕಿವಿ ಮಾತನ್ನು ಹೇಳಲು ಅಪೇಕ್ಷೆ ಇದೆ. (ಇದೇ ಸಂಚಿಕೆಯ ಶ್ರೀವಾಣಿಯಲ್ಲಿ ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಚನದ ಸಾರಸಂಗ್ರಹವನ್ನು ಕೊಡಲಾಗಿದೆ.) ಕೊನೆಯಲ್ಲಿ ಶರಣು ಸಮರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ವರದಿ : ಕೆ.ಹೆಚ್. ಶಿವರುದ್ರಯ್ಯ

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೯೯. | **ಶ್ರೀ ಆರ್.ಬಿ. ಕೆಂಚಯ್ಯ**<br>ಸ್ವಾತಂತ್ರ್ಯ ಹೋರಾಟಗಾರರು,<br>ಲಕ್ಕನಹಳ್ಳಿ, ಸಿರಾ ತಾಲ್ಲೂಕು,<br>ತುಮಕೂರು ಜಿಲ್ಲೆ. | ೨,೦೦೧.೦೦ |
| ೮೦೦. | **ಶ್ರೀ ಜಿ.ಆರ್. ಗಂಗಾಧರಪ್ಪ**<br>ಶ್ರೀನಗರ ಬಡಾವಣೆ, ೧ನೇ ಮುಖ್ಯರಸ್ತೆ,<br>೧ನೇ ತಿರುವು, ದೇವರಾಯಪಟ್ಟಣ ಅಂಚೆ<br>ತುಮಕೂರು – ೪. | ೧,೦೦೧.೦೦<br>(೨ನೇ ಕಂತು) |
| ೮೦೧. | **ಶ್ರೀ ಎ.ಆರ್. ಕೋಟಗಿ**<br>ನಿವೃತ್ತ ಶಿಕ್ಷಕರು,<br>ಗಜೇಂದ್ರಘಡ,<br>ಗದಗ ಜಿಲ್ಲೆ– ೫೮೨೧೧೪. | ೧,೦೦೦.೦೦<br>(೧ನೇ ಕಂತು) |
| ೮೦೨. | **ಶ್ರೀ ಎನ್. ಷಣ್ಮುಖಪ್ಪ**<br>ನಿವೃತ್ತ ಗಣಿತಶಾಸ್ತ್ರ ಪ್ರಾಧ್ಯಾಪಕರು, .<br>ನಂ. ೨೭೪೩, ೨ನೇ ಮುಖ್ಯರಸ್ತೆ,<br>೫ನೇ ಕ್ರಾಸ್, ಎಂ.ಸಿ.ಸಿ. 'ಬಿ' ಬ್ಲಾಕ್,<br>ದಾವಣಗೆರೆ – ೪. | ೨,೦೦೧.೦೦ |
| ೮೦೩. | **ಶ್ರೀಮತಿ ಗೌರಮ್ಮ**<br>ಸಹ ಶಿಕ್ಷಕಿ,<br>ಎಂ.ಜಿ.ಎಂ. ಬಾಲಕಿಯರ ಪ್ರೌಢಶಾಲೆ,<br>ಮಧುಗಿರಿ, ತುಮಕೂರು ಜಿಲ್ಲೆ. | ೫,೦೦೧.೦೦<br>(೨ನೇ ಕಂತು) |
| ೮೦೪. | **ಶ್ರೀ ಬಿ.ಸಿ. ಚಂದ್ರಶೇಖರಯ್ಯ**<br>ನಂ. ೯೭೨, ೧ನೇ ಬ್ಲಾಕ್, ೨ನೇ ಕ್ರಾಸ್,<br>೩ನೇ ಹಂತ, ಬಸವೇಶ್ವರನಗರ,<br>ಬೆಂಗಳೂರು – ೭೯. | ೨,೦೦೧.೦೦ |
| ೮೦೫. | **ಶ್ರೀ ಪರಮೇಶ್ವರಪ್ಪ**<br>ಲೆಕ್ಕಾಧಿಕಾರಿಗಳು,<br>ತಾಲ್ಲೂಕು ಖಜಾನೆ, ಹೊಸಕೋಟೆ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦<br>(೨ನೇ ಕಂತು) |
| ೮೦೬. | **ಶ್ರೀ ಎನ್. ಪಂಚಾಕ್ಷರಯ್ಯ**<br>ಶಿಕ್ಷಕರು, 'ಶಾಂತಿಧಾಮ',<br>ಎನ್.ಹೆಚ್. ರಸ್ತೆ ಮಲ್ಲಸಂದ್ರ,<br>ಮತ್ತು ಅಂಚೆ, ತುಮಕೂರು ತಾಲ್ಲೂಕು | ೫೦೦.೦೦<br>(೨ನೇ ಕಂತು) |
| ೮೦೭. | **ಶ್ರೀ ನರಸೀಯಪ್ಪ**<br>ಶಿಕ್ಷಕರು,<br>'ಶ್ರೀ ಮಾರುತಿ ಕೃಪ'<br>೫ನೇ ಮುಖ್ಯರಸ್ತೆ, ಕಾವೇರಿ ರಸ್ತೆ,<br>ಚಂದ್ರಮೌಳೇಶ್ವರ ಬಡಾವಣೆ, ಕ್ಯಾತ್ಸಂದ್ರ<br>ತುಮಕೂರು – ೫೭೨ ೧೦೪. | ೧,೦೦೧.೦೦<br>(೧ನೇ ಕಂತು) |
| ೮೦೮. | **ಶ್ರೀ ಟಿ. ಮೃತ್ಯುಂಜಯ ಮತ್ತು ಕುಟುಂಬ**<br>ತೋಂಟದಾರ್ಯ ನಿಲಯ,<br>ಟಿ.ಪಿ. ಕೈಲಾಸಂ ರಸ್ತೆ, ೩ನೇ ಕ್ರಾಸ್,<br>ಸಪ್ತಗಿರಿ ನಗರ, ತುಮಕೂರು. | ೨,೦೦೧.೦೦ |
| ೮೦೯. | **ಶ್ರೀ ಹೆಚ್.ಕೆ. ಶಿವಪ್ರಸಾದ್**<br>ಬಿನ್ ಕರಿಬಸವಯ್ಯ<br>ಸ್ವರ್ಣಗಂಗಾ ದೇವಸ್ಥಾನದ ರಸ್ತೆ,<br>ಮಾರುತಿನಗರ,<br>ತುಮಕೂರು – ೫೭೨ ೧೦೨. | ೧,೦೦೦.೦೦<br>(೨ನೇ ಕಂತು) |
| ೮೧೦. | **ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ**<br>ಮುಖ್ಯಸ್ಥರು, ಸಮಾಜಶಾಸ್ತ್ರ ವಿಭಾಗ,<br>ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,<br>ತುಮಕೂರು. | ೪,೦೦೨.೦೦<br>(೧೭ ಮತ್ತು ೧೮ನೇ ಕಂತು) |
| ೮೧೧. | **ಶ್ರೀಮತಿ ಚೆನ್ನಮ್ಮ, ಪಿ.ಎ.ಕೆ. ಉರಿಯಪ್ಪ**<br>ರಕ್ಷಣಾಪುರಂ,<br>ಹಳೇ ಅಂಚೆ ಕಛೇರಿ ರಸ್ತೆ,<br>ರಂಗೋಲಿಹಳ್ಳಿ,<br>ಹಾಸನ – ೫೭೩ ೨೦೧. | ೨,೨೦೧.೦೦ |
| ೮೧೨. | **ಶ್ರೀ ಎಸ್.ಸಿ. ಬಸವರಾಜು, ಎಂ.ಎಸ್ಸಿ., (ಅಗ್ರಿ),**<br>ನಿವೃತ್ತ ಜಂಟಿ ನಿರ್ದೇಶಕರು,<br>ನಂ. ೪೩೩, ವಿಶ್ವಭಾರತಿ,<br>೧೬ನೇ 'ಎ' ಮುಖ್ಯರಸ್ತೆ, ಜಯನಗರ,<br>೪ನೇ ಟಿ ಬ್ಲಾಕ್, ಬೆಂಗಳೂರು – ೪೧. | ೨,೧೦೧.೦೦ |
| ೮೧೩. | **ಶ್ರೀ ಡಿ. ಶಿವಣ್ಣ**<br>ಕನ್ನಡ ಉಪಾಧ್ಯಾಯರು,<br>ಗ್ರಾಮಾಂತರ ಪ್ರೌಢಶಾಲೆ ಹಾರೋಹಳ್ಳಿ<br>ಕನಕಪುರ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೩೦೦.೦೦<br>(೧ನೇ ಕಂತು) |





| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೮೧೪. | **ಶ್ರೀ ಚಿಕ್ಕಮಲ್ಲಯ್ಯ ಬಿನ್ ಶಾಂತಪ್ಪ**<br>ನರಸೀಪುರ, ಮಾಸ್ತಹಟ್ಟಿ ಅಂಚೆ,<br>ದಾಸನಪುರ ಹೋಬಳಿ,<br>ಬೆಂಗಳೂರು ಉತ್ತರ ತಾಲ್ಲೂಕು<br>ಬೆಂಗಳೂರು ಜಿಲ್ಲೆ. | ೨,೦೦೦.೦೦ |
| ೮೧೫. | **ಅಧ್ಯಕ್ಷರು**<br>ತುಮಕೂರು ತಾಲ್ಲೂಕು ಇಂಡಸ್ಟ್ರೀಯಲ್<br>ಕೋ-ಆಪರೇಟೀವ್ ಸೊಸೈಟಿ ಲಿಮಿಟೆಡ್,<br>ತುಮಕೂರು. | ೫,೦೦೧.೦೦ |
| ೮೧೬. | **ಶ್ರೀ ಎಂ. ಸುಬ್ಬಣ್ಣ**<br>ರಿಟೈರ್ಡ್ ಚೀಫ್ ಕಂಟ್ರೋಲರ್,<br>ಶ್ರೀ ಬಸವೇಶ್ವರ ನಿಲಯ,<br>ನಂ. ೨೯೧, ೧ನೇ ಮಹಡಿ, ೨ನೇ ಹೆಚ್. ಕ್ರಾಸ್,<br>೫ನೇ ಮುಖ್ಯರಸ್ತೆ, ಬಸವೇಶ್ವರ ನಗರ,<br>೩ನೇ ಸ್ಟೇಜ್, ೩ನೇ ಬ್ಲಾಕ್,<br>ಬೆಂಗಳೂರು – ೫೬೦ ೦೭೯. | ೨,೧೦೦.೦೦ |
| ೮೧೭. | **ಶ್ರೀ ಆರ್.ಎಸ್. ಬಸವಲಿಂಗಪ್ಪ**<br>ಬಿನ್ ಶಿವಣ್ಣ,<br>ರಂಗಾಪುರ ಮತ್ತು ಅಂಚೆ<br>ತಿಪಟೂರು ತಾ., ತುಮಕೂರು ಜಿಲ್ಲೆ. | ೯೦೦.೦೦<br>(೨ನೇ ಕಂತು) |
| ೮೧೮. | **ಶ್ರೀ ಜಗದೀಶ್**<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಗಂಜಲಗುಂಟೆ, ಮಧುಗಿರಿ ತಾಲ್ಲೂಕು<br>ತುಮಕೂರು ಜಿಲ್ಲೆ– ೫೭೨ ೧೩೨. | ೧,೦೦೦.೦೦<br>(೨ನೇ ಕಂತು) |
| ೮೧೯. | **ಡಾ. ಜಿ.ಎಸ್. ನಾಗರಾಳ್**<br>'ಶಿವಜ್ಯೋತಿ', ಹನುಮಂತಪುರ-<br>-ಲಿಂಕ್ ರಸ್ತೆ, ತುಮಕೂರು. | ೨,೦೦೧.೦೦ |
| ೮೨೦. | **ಶ್ರೀ ಎ.ಆರ್. ಕೋಟಗಿ**<br>ನಿವೃತ್ತ ಶಿಕ್ಷಕರು, ಗಜೇಂದ್ರ ಘಢ,<br>ಗದಗ ಜಿಲ್ಲೆ– ೫೮೨ ೧೧೪. | ೨,೫೦೦.೦೦ |
| ೮೨೧. | **ಶ್ರೀ ಹೆಚ್. ದೊಡ್ಡಣ್ಣ**<br>ಕೇರಾಫ್ ಡಿ. ಶಂಕರಾನಂದಯ್ಯ,<br>ಹೊಸಹಳ್ಳಿ, ಪಾವಗಡ ತಾಲ್ಲೂಕು<br>ತುಮಕೂರು ಜಿಲ್ಲೆ. | ೧,೦೦೦.೦೦<br>(ಅಂತಿಮ ಕಂತು) |
| ೮೨೨. | **ದೊಡ್ಡಬಳ್ಳಾಪುರ ತಾಲ್ಲೂಕು,**<br>ಗೂಳ್ಯ ಗ್ರಾಮಸ್ಥರಿಂದ ಗ್ರಾಮಾಂತರ<br>ಬಸವಜಯಂತಿ ಕಾರ್ಯಕ್ರಮ ದಿನಾಂಕ<br>೨೧-೫-೨೦೦೨ರ ಜ್ಞಾಪಕಾರ್ಥವಾಗಿ | ೧೦,೦೦೧.೦೦ |
| ೮೨೩. | **ಡಾ. ಸಂಗಮನಾಥ ಬಸಪ್ಪ ಶೆಟ್ಟರ್**<br>ಬುಳ್ಳಗಳ್ಳಿ, ಪಾರ್ಶ್ವನಾಥ ರಸ್ತೆ,<br>ವಕ್ಕಲಗೇರಿ, ಗದಗ್ – ೫೮೨ ೧೦೧. | ೨,೧೦೦.೦೦ |
| ೮೨೪. | **ಡಾ. ಸುರೇಶ್ ಕೂರ್ಲಳ್ಳಿ**<br>ಯಲಮಲಿ ನರ್ಸಿಂಗ್ ಹೋಂ,<br>ಲ್ಯಾಮಿಂಗ್ಟನ್ ರಸ್ತೆ, ಹುಬ್ಬಳ್ಳಿ. | ೨,೧೦೦.೦೦ |
| ೮೨೫. | **ಡಾ. ರಾಜಶೇಖರ ಪವಾಡಶೆಟ್ಟರ್**<br>"ಶಿವಶ್ರೀ", ಮುಳುಗುಂದ ರಸ್ತೆ,<br>ಶ್ರೀ ಸಿದ್ಧಲಿಂಗೇಶ್ವರನಗರ, ಗದಗ. | ೧,೦೦೧.೦೦<br>(೨ನೇ ಕಂತು) |
| ೮೨೬. | **ಶ್ರೀ ಪಾಲಾಕ್ಷಯ್ಯ**<br>ಇಂಜಿನಿಯರ್,<br>ನಂ. ಬಿ. ೫/೪೦೪, 'ಜಾನಕಿ'<br>ಸಫಲ್ ಕಾಂಪ್ಲೆಕ್ಸ್<br>ಕಾಸ್ಮೋಪಾಲಿಟನ್ ಸೆಕ್ಟಾರ್ – ೧೯,<br>ನೆರುಲ್, ನವಮುಂಬಯಿ – ೪೦೦೭೦೬. | ೫,೦೦೦.೦೦<br>(೩ನೇ ಕಂತು) |
| ೮೨೭. | **ಶ್ರೀ ಬಿ.ಎಲ್. ಗಂಗಾಧರ್**<br>ನಂ. ೯೨೧, ೧೭ನೇ ಮುಖ್ಯರಸ್ತೆ,<br>೩ನೇ ಬ್ಲಾಕ್, ರಾಜಾಜಿನಗರ,<br>ಬೆಂಗಳೂರು – ೫೬೦ ೦೧೦. | ೨,೦೦೧.೦೦ |
| ೮೨೮. | **ಶ್ರೀ ವೀರಭದ್ರಯ್ಯ ಬಿನ್ ವೀರಪ್ಪ**<br>ನಂ. ೨೨೫/೪, ಶ್ರೀ ವೀರಭದ್ರಸ್ವಾಮಿ ನಿಲಯ,<br>೧೪ನೇ ಮುಖ್ಯರಸ್ತೆ, ಸುಬ್ರಹ್ಮಣ್ಯನಗರ,<br>ಬೆಂಗಳೂರು – ೫೬೦ ೦೨೧. | ೫೦,೦೦೦.೦೦ |
| ೮೨೯. | **ಶ್ರೀ ಕೆ.ಎಂ. ಕಾಂತರಾಜು ಮತ್ತು ಮಕ್ಕಳು**<br>ಶ್ರೀ ಮಹೇಶ್ ಕಾಫಿ ವರ್ಕ್ಸ್,<br>ಜಿಗಣಿ ಮತ್ತು ಅಂಚೆ,<br>ಆನೇಕಲ್ ತಾಲ್ಲೂಕು,<br>ಬೆಂಗಳೂರು – ೫೬೨ ೧೦೬. | ೧೦,೦೦೧.೦೦ |
| ೮೩೦. | **ಚಿ. ಸಿದ್ದಾರ್ಥ ಬಿನ್ ಎನ್.ಎಸ್. ರವೀಶಂಕರ್**<br>ನಂ. ೩, ೬ನೇ 'ಎ' ಕ್ರಾಸ್, ೯ನೇ ಮುಖ್ಯರಸ್ತೆ,<br>ಕೆ.ಎನ್. ಬಡಾವಣೆ, ಯಶವಂತಪುರ,<br>ಬೆಂಗಳೂರು. | ೫,೦೦೧.೦೦ |

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೪೧. | **ಶ್ರೀ ಕೆ.ಬಿ. ಶಿವಣ್ಣ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೦.೦೦ |
| ೪೪೨. | **ಶ್ರೀ ಪಿ.ಎಸ್. ಶಂಭುಲಿಂಗಪ್ಪ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು,<br>ತುಮಕೂರು ಜಿಲ್ಲೆ. | ೧,೦೦೦.೦೦ |
| ೪೪೩. | **ಶ್ರೀ ಎಸ್. ಮಹದೇವಯ್ಯ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು. | ೧,೦೦೦.೦೦ |
| ೪೪೪. | **ಶ್ರೀ ಜೆ.ಎಲ್. ಲಿಂಗಯ್ಯ**<br>ದ್ವಿ.ದ.ಸ.,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು. | ೧,೦೦೦.೦೦ |
| ೪೪೫. | **ಶ್ರೀ ಬಿ.ಎಸ್. ಯತಿರಾಜು**<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೪೬. | **ಶ್ರೀ ಜಿ. ಚಿಕ್ಕಣ್ಣ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ),<br>ತುಮಕೂರು – ೨. | ೧,೦೦೧.೦೦ |
| ೪೪೭. | **ಶ್ರೀ ಬಿ.ಆರ್. ಸೋಮಶೇಖರಯ್ಯ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜು,<br>(ಪ್ರೌಢಶಾಲಾ ವಿಭಾಗ),<br>ತುಮಕೂರು – ೨. | ೧,೦೦೧.೦೦ |
| ೪೪೮. | **ಶ್ರೀ ಬಿ. ಶಿವರುದ್ರಪ್ಪ**<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂ. ಪದವಿ ಪೂರ್ವ ಕಾಲೇಜು<br>ಪ್ರೌಢಶಾಲಾ ವಿಭಾಗ, ಬಿ.ಹೆಚ್. ರಸ್ತೆ,<br>ತುಮಕೂರು – ೨. | ೧,೦೦೧.೦೦ |
| ೪೪೯. | **ಶ್ರೀ ಜಿ.ಆರ್. ಚಂದ್ರಶೇಖರಯ್ಯ**<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ, ಸೋಲೂರು,<br>ಮಾಗಡಿ ತಾಲ್ಲೂಕು – ೫೬೨ ೧೨೭,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೧.೦೦ |
| ೪೫೦. | **ಶ್ರೀ ಟಿ.ಎನ್. ಶಿವಕುಮಾರ್**<br>ಮುಖ್ಯ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೪೫೧. | **ಶ್ರೀಮತಿ ವೈ.ಬಿ. ನಂಜಮ್ಮ**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೪೫೨. | **ಶ್ರೀಮತಿ ಜಿ.ಆರ್. ಸಾವಿತ್ರಮ್ಮ**<br>ಸಹ ಶಿಕ್ಷಕಿ,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೪೫೩. | **ಶ್ರೀ ಕೆ.ಜಿ. ಚಂದ್ರಶೇಖರ್**<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |
| ೪೫೪. | **ಶ್ರೀಮತಿ ಜಯಶ್ರೀ**<br>ಸಹ ಶಿಕ್ಷಕಿ,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಶುಕ್ರವಾರಸಂತೆ, ಸಕಲೇಶಪುರ ತಾಲ್ಲೂಕು,<br>ಹಾಸನ ಜಿಲ್ಲೆ. | ೧,೦೦೧.೦೦ |

*(ಮುಂದುವರಿಯುತ್ತದೆ)*

RNI No. 17139/69

"Siddaganga" Monthly - postal Reg.No. KA/SK/TMR/385/2003

# ಸಿದ್ಧಗಂಗಾ 2003

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



### ಜನವರಿ

| | | | | | |
|---|---|---|---|---|---|
| ಭಾ | * | 5 | 12 | 19 | 26 |
| ಸೋ | * | 6 | 13 | 20 | 27 |
| ಮಂ | * | 7 | 14 | 21 | 28 |
| ಬು | 1 | 8 | 15 | 22 | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | 31 |
| ಶ | 4 | 11 | 18 | 25 | * |

### ಫೆಬ್ರವರಿ

| | | | | | |
|---|---|---|---|---|---|
| ಭಾ | * | 2 | 9 | 16 | 23 |
| ಸೋ | * | 3 | 10 | 17 | 24 |
| ಮಂ | * | 4 | 11 | 18 | 25 |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | * |

### ಮಾರ್ಚ್

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | 31 | 3 | 10 | 17 | 24 |
| ಮಂ | * | 4 | 11 | 18 | 25 |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | 29 |

### ಏಪ್ರಿಲ್

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1 | 8 | 15 | 22 | 29 |
| ಬು | 2 | 9 | 16 | 23 | 30 |
| ಗು | 3 | 10 | 17 | 24 | * |
| ಶು | 4 | 11 | 18 | 25 | * |
| ಶ | 5 | 12 | 19 | 26 | * |

### ಮೇ

| | | | | | |
|---|---|---|---|---|---|
| ಭಾ | * | 4 | 11 | 18 | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | 31 |

### ಜೂನ್

| | | | | | |
|---|---|---|---|---|---|
| ಭಾ | 1 | 8 | 15 | 22 | 29 |
| ಸೋ | 2 | 9 | 16 | 23 | 30 |
| ಮಂ | 3 | 10 | 17 | 24 | * |
| ಬು | 4 | 11 | 18 | 25 | * |
| ಗು | 5 | 12 | 19 | 26 | * |
| ಶು | 6 | 13 | 20 | 27 | * |
| ಶ | 7 | 14 | 21 | 28 | * |

### ಜುಲೈ

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1 | 8 | 15 | 22 | 29 |
| ಬು | 2 | 9 | 16 | 23 | 30 |
| ಗು | 3 | 10 | 17 | 24 | 31 |
| ಶು | 4 | 11 | 18 | 25 | * |
| ಶ | 5 | 12 | 19 | 26 | * |

### ಆಗಸ್ಟ್

| | | | | | |
|---|---|---|---|---|---|
| ಭಾ | 31 | 3 | 10 | 17 | 24 |
| ಸೋ | * | 4 | 11 | 18 | 25 |
| ಮಂ | * | 5 | 12 | 19 | 26 |
| ಬು | * | 6 | 13 | 20 | 27 |
| ಗು | * | 7 | 14 | 21 | 28 |
| ಶು | 1 | 8 | 15 | 22 | 29 |
| ಶ | 2 | 9 | 16 | 23 | 30 |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾ | * | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | * |
| ಗು | 4 | 11 | 18 | 25 | * |
| ಶು | 5 | 12 | 19 | 26 | * |
| ಶ | 6 | 13 | 20 | 27 | * |

### ಅಕ್ಟೋಬರ್

| | | | | | |
|---|---|---|---|---|---|
| ಭಾ | * | 5 | 12 | 19 | 26 |
| ಸೋ | * | 6 | 13 | 20 | 27 |
| ಮಂ | * | 7 | 14 | 21 | 28 |
| ಬು | 1 | 8 | 15 | 22 | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | 31 |
| ಶ | 4 | 11 | 18 | 25 | * |

### ನವೆಂಬರ್

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | * | 3 | 10 | 17 | 24 |
| ಮಂ | * | 4 | 11 | 18 | 25 |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | 29 |

### ಡಿಸೆಂಬರ್

| | | | | | |
|---|---|---|---|---|---|
| ಭಾ | * | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | 31 |
| ಗು | 4 | 11 | 18 | 25 | * |
| ಶು | 5 | 12 | 19 | 26 | * |
| ಶ | 6 | 13 | 20 | 27 | * |